ಹರಿ: ಓಂ

ಸಾಂಶರೂ ಅಪರೋಕ್ಷ ಜ್ಞಾನಿಗಳೂ

ಶ್ರೀ ಪರಮಹಂಸ ವ್ಯಾಸ ತತ್ವಜ್ಞರು ಐಜಿ ಸ್ವಾಮಿಗಳಾದ

# ಶ್ರೀ ವಾಸುದೇವ ವಿಟ್ಠಲರ ಕೃತಿಗಳು

## ಮತ್ತು ಜೀವನ ಚರಿತ್ರೆ





ಶ್ರೀ ಗೋಪಾಲದಾಸಾರ್ಯರು ಚಿತ್ರಿಸಿದ ದ್ವಾದಶಕಮಲ ವೈಕುಂಠಸ್ಥ
ಶ್ವೇತ ವರಣ ವಾಸುದೇವ ಮೂರ್ತಿ

ಪ್ರಕಟನೆ ೩೨ ಶಕೆ ೧೮೭೮ ಕಾ. ಬ. ೧೩. ತಾ. ೧-೧೨-೫೬

ಮೊದಲನೇ ಆವೃತ್ತಿ [ ೧೦೦೦ ಪ್ರತಿ ]

ಪ್ರಕಾಶಕರು,

ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ ಲಿಂಗಸೂಗೂರ [illegible]

# ವಿನಂತಿ



ನಮ್ಮ ನಮ್ಮಂಡಲದಿಂದ ಪ್ರಸ್ತುತ ಪ್ರಕಟವಾದ ಈ ವಾಸುದೇವ ವಿಠಲರ ಕೃತಿಗಳು. ೩೬ನೇ ಪ್ರಕಟನೆಯು, ಇದರಲ್ಲಿ. ಶ್ರೀ ಶ್ರೀಪರಮಹಂಸ ಶ್ರೀ ಐಜಿ ಸ್ವಾಮಿಗಳಾದ ಶ್ರೀ ವ್ಯಾಸತತ್ವಜ್ಞರೂ ದೇವಾಂಶರೂ ಅಪರೋಕ್ಷ ಜ್ಞಾನಿಗಳಾದ ಶ್ರೀ ವಾಸುದೇವ ವಿಠಲರು. ವೇಣಿ ಸೋಮಪುರ ಇವರ ದೊರೆತಷ್ಟು ಎಲ್ಲ ಕೃತಿಗಳು ಸಂಗ್ರಹಿಸಲಾಗಿದೆ. ೧೦ ಉಗಾಭೋಗಗಳು. ೧೬ ಸುಳಾದಿಗಳು ೬೫ ಪದಗಳು ಮತ್ತು ಅವರ ಮೇಲಿನ ಸ್ತೋತ್ರಪದಗಳು. (೩೦) ಅವರ ಸ್ತೋತ್ರಪದಗಳ ಆಧಾರ ಮೇಲಿಂದಲೇ ಜೀವನ ಚರಿತ್ರೆ ಸಂಗ್ರಹಿಸಿದೆ.

ಅಪರೋಕ್ಷ ಜ್ಞಾನಿಗಳಾದ ಶ್ರೀ ಗೋಪಾಲದಾಸಾರ್ಯರಾದಿ ಎಲ್ಲ ದಾಸರು ಇವರ ಮಹಿಮೆ ಕೊಂಡಾಡಿರುತ್ತಾರೆ. ಕಾರಣ ಗೋಪಾಲದಾಸರ ಚರಿತ್ರೆ ಪ್ರಕಟನೆಕಿಂತಲೂ ಮೊದಲಿಗೆ ಪ್ರಚುರಗೊಳಿಸಿದೆ. ಈ ಮಹತ್ಮರ ಕೃತಿಗಳೆಲ್ಲ ಬಹು ಸರಸವೂ ಗಂಭೀರವೂ ಭಕ್ತಿದಾಯಕವೂ ಆಗಿವೆ. ಮೊದಲಿಗೆ ವಿನಂತಿ ಮಾಡಿದಂತೆ ಈ ಕೃತಿಗಳೆಲ್ಲ ೧ ವರ್ಷ ಮೊದಲೇ ಅಚ್ಚಾಗ ಬೇಕಾಗಿತ್ತು. ಆದರೆ ಹಣಕಾಶಿನ ಅನಾನುಕೂಲತೆ ಈ ವ್ಯಾಸ ತತ್ವಜ್ಞರ ಪೂರ್ವಾಶ್ರಮದ ವಂಶಜರಾದ ಶ್ರೀ ವೆ। ಗೋಪಾಲ ಕೃಷ್ಣಾಚಾರ್ಯರು: ಶ್ರೀ ಹಯವದಾನಾಚಾರ್ಯರು ಶ್ರೀನಿವಾಸಾಚಾರ್ಯರರು ಶ್ರೀಮತಿ ಕು॥ ಸೌ॥ ಸೀತಮ್ಮನವರ ಪತಿಗಳಾದ ಶ್ರಿಕೃಷ್ಣರಾವ ಚೊಕ್ಕಾನಹಳ್ಳಿ ಜಹಗೀರದಾರರು. ಶ್ರೀ ವೆಂಕೋಬದಾಸರ ದ್ವಾರಾ ವಚನವಿತ್ತಂತೆ ಪೋಷಕ ಧನಸಹಾಯನೀಡಿ ಪ್ರೆಸ್ಸು ಬ್ಯಾಂಕುಗಳ ತಗಾದಿ ತೀರಿಸುವರೆಂದು ಪೂರ್ಣನಂಬಿ ಮೂವರಲ್ಲಿಯೂ ಪ್ರಾರ್ಥಿಸುವೆ. ಇದಲ್ಲದೆ ನಮಗೆ ೧೦೧ ರೂ. ಕೊಡುವೆವೆಂದು ವಚನವಿತ್ತು ೫೦-೫೦ ರೂ. ಪುಸ್ತಕ ತೆಗೆದು ಕೊಂಡ ೧೦ ಜನ ಪೋಷಕರೂ. ೧೩೦ ಜನ ಚಂದಾದಾರರು. ಕೆಲವು ಚಿಲ್ಲರವಾಗಿ ಪುಸ್ತಕಗಗಳ ಬಾಕಿ ಸುಮಾರು ೨॥ ಸಾವಿರ ರೂ. ಬಾಕಿ ನಿಂತುಹೋಗಿದೆ. ಇನ್ನಾದರೂ ತ್ವರಾ ಕಳಿಸುವರೆಂದು ಎಲ್ಲರಿಗೆ ಪ್ರಾರ್ಥಿಸುವೆ. ದಾಸರೇ ಅವರಿಗೆ ಬುದ್ಧಿಕೊಟ್ಟು ಕಾರ್ಯಸಾಗಿಸಬೇಕು,

ಪ್ರಸ್ತುತ ಈ ಚರಿತ್ರೆ ಕೆಲ ಭಾಗಗಳು ಶ್ರೀ ಸ್ವಾಮಿಗಳ ಪೂರ್ವಾಶ್ರಮದ ವಂಶಜರೂ ೮೦ ವರ್ಷ ವೃದ್ಧರಾದ ಶ್ರೀ ಸಾವಿತ್ರೆಮ್ಮನವರು ಪರಂಪರಾಗತ ಕೆಲ ಇತಿಹಾಸಗಳನ್ನು ಪೇಳಿದ್ದಕ್ಕಾಗಿ ವೃದ್ಧಮಾತೆಯ ಅಭಿನಂದಪೂರ್ವಕ ಅನೇಕದಂಡ ಪ್ರಣಾಮಗಳನ್ನರ್ಪಿಸುವೆವು.

ಸುಳಾದಿ ಮಟ್ಟಿಗೆ ಪ್ರೆಸ್ ಕಾಪಿ ಬರೆದುಕೊಟ್ಟ ಹಿರಿಯರಾದ ಶ್ರೀ ಶೇಷಗಿರರಾವ ಬಾಗಲಕೋಟೆ ಮತ್ತು ತ್ವರೆಯಾಗಿ ಸುಂದರವಾಗಿ ಒಳ್ಳೆ ಕಾಗದದಲ್ಲಿ ಅಚ್ಚು ಮಾಡಿಕೊಟ್ಟ ಶ್ರೀ ಪದ್ಮನಾಭರು ಮಾಲಕ. ನ್ಯೂ ಗದಗ ಪ್ರಿಂಟರಿ. ಮತ್ತು ಅಚ್ಚಿನ ಕಾಲದಲ್ಲಿ ನನ್ನರುವಿಗೆ ಆಶ್ರಯಕೊಟ್ಟ ಭಗವದ್ಭಕ್ತರಾದ ಶ್ರೀ ವೆಂಕೋಬರಾಯರು ಬಳ್ಳಾರಿ. N. C. ಮಿಲ್, ಗದಗ. ಇವರ ಉಪಕಾರ ಸ್ಮರಿಸುತ್ತೇವೆ.

೨೯-೧೧-೫೬
**ಗುರುವಾರ**

ದಾಸರದಾಸ–ವಿದ್ವಾನ ಸಾಹಿತ್ಯ ಸೇವಾಲಂಕಾರ,
**ಹನಮಂತರಾವ ವಕೀಲ ಗೊರಾಬಾಳ,**
ಸಂಚಾಲಕ ಮಂಡಲ.



|| ಶ್ರೀ ಗುರು ರಾಜೋವಿಜಯತೇ ||

**ಶ್ರೀ ವ್ಯಾಸ ತತ್ವಜ್ಞರು ಐಜಿಸ್ವಾಮಿಗಳು**

# ಶ್ರೀ ವಾಸುದೇವ ವಿಠಲರ ಜೀವನ ಚರಿತ್ರೆ

**ಶ್ಲೋಕ**

ವಂದೇಹಂ ವ್ಯಾಸ ತತ್ವಜ್ಞಂ ।
ನಿಂದಿತಾಖಿಲ ದುರ್ಮತಿಂ ॥
ನಂದಿತಾಖಿಲ ಸಂದ್ವೃಂದಂ ।
ನಂದಸೂನು ಪದಾರ್ಚಕಮ್ ॥೧॥

ಭಾಮಿನಿ

ವಾಸುದೇವನದಾಸರೆ ನಿಸ್ಯೈಘ ।
ರಾಶಿಗಳ ಓಡಿಸುವ ದೀನರ ।
ಪೋಷಕನೆ ಕಾರುಣ್ಯವನನಿಧಿ ಆರ್ತಜನಬಂಧೋ ॥
ಈ ಸಕಲ ವಿವಿಜಾಗ್ರಗಣ್ಯರ ।
ದಾಸರಿಗೆ ಪರತತ್ವ ಬೋಧಿಸಿ ।
ಸಾಸಿರಕೆ ಬೆಲೆ ಮಾಳ್ಪ **ಮಮಗುರು ವ್ಯಾಸತತ್ವಜ್ಞ**
(ಕೃಷ್ಣವಿಠಲರು) ॥೧॥

ಗ್ರಂಥಕರ್ತೃರ— **ಜೀವನ ಚರಿತ್ರೆ ಮುಖ್ಯಾಂಶಗಳು**

೧ ಶ್ರೀ ಐಜಿ ಸ್ವಾಮಿಗಳಾದ ಶ್ರೀ ವ್ಯಾಸತತ್ವ ತೀರ್ಥರು ಶ್ರೀ ಭುವನೇಂದ್ರ ತೀರ್ಥರ ಶಿಷ್ಯರು ಶ್ರೀ ಅಗ್ನಿವರ ಅಂಶವೆಂದು ಆರ್ಯರ ವಚನ.

೨ ಇವರು ದಿನ್ನಿ ಗ್ರಾಮ ತಾ॥ ರಾಯಚೂರ ಜೋಯಿಸರು.

೩ ಇವರ ಪಿತಾಮಹರು ದಿನ್ನಿ ಶ್ರೀ ಜನಾರ್ದನಾಚಾರ್ಯರು. ಇವರ ಪಿತೃಗಳು ಶ್ರೀ ಐಜಿ ವೆಂಕಟನೃಶಿಂಹಾಚಾರ್ಯರು. ಜ್ಞಾನಿಗಳು ಚತುಃಶಾಸ

ಪಂಡಿತರು. ಇವರು ದಿನ್ನಿಯಿಂದ ಐಜಿಗೆ ಪ್ರಯಾಣ ಬೆಳಿಸಿದರು. ಇವರ ಎರಡನೇ ಗೋತ್ರಜರು ದಿನ್ನಿಯಲ್ಲಿ ಇರುವರು.

೪ ಶ್ರೀ ವೆಂಕಟನೃಸಿಂಹಾಚಾರ್ಯರು ಐಜಿಗೆ ಹೋದನಂತರ ಶ್ರೀನಿವಾಸನ ಪ್ರಸಾದದಿಂದ ಇವರು ಹುಟ್ಟಿದರು. ಇವರ ಜನ್ಮಸ್ಥಳ ಐಜಿ ಎಂಬೋ ಗ್ರಾಮ ತಾ|| ಗದ್ವಾಲ.

೫ ಇವರ ಜನನ ಸುಮಾರು ಶಾಲಿವಾಹನ ಶಕೆ ೧೬೨೬ರಲ್ಲಿ ಆಗಿರುವದು. (೯೬) ವರ್ಷ ಪರಿಯಂತವಾಗಿ ಭೂಮಿಮೇಲೆ ನಾಲ್ಕೂ ಆಶ್ರಮದಲ್ಲಿದ್ದು ಸಾಧನ ಮಾಡಿ ಸಜ್ಜನರನ್ನು ಉದ್ಧಾರಗೈಸಿ ಶಕೆ ೧೭೨೨ ರೌದ್ರಿನಾಮ ಸಂವತ್ಸರ ಶ್ರಾವಣ ವದಿ ಕೃಷ್ಣಾಷ್ಟಮಿ ಭಾನುವಾರ ಭರಣಿ ನಕ್ಷತ್ರ ಪ್ರಾತಃಕಾಲ (ಕ್ರಿ. ಶ. ೧೮೦೦ ರಲ್ಲಿ) ವೇಣಿ ಸೋಮಪುರದ ಶ್ರೀ ವೇಣು ಗೋಪಾಲ ಕೃಷ್ಣನ ಪಾದಸನ್ನಿಧಿ ವೈಕುಂಠ ಯಾತ್ರೆ ಮಾಡಿದರೆಂದು ಶ್ರೀ ಜಗನ್ನಾಥ ದಾಸಾಚಾರ್ಯರ ವಚನ.

೬ ಇವರ ವೃಂದಾವನ ವೇಣಿ ಸೋಮಪುರದಲ್ಲೇ ಇದೆ. ತುಂಗಭದ್ರಾ ತೀರ ರಮಣೀಯ ಸ್ಥಳ ಇಂದಿಗೆ ವೃಂದಾವನಸ್ಥರಾಗಿ ೧೫೬ ವರ್ಷವಾದಿತು. ಶ್ರೀ ಸ್ವಾಮಿಗಳ ಪೂರ್ವಾಶ್ರಮದ ವಂಶಜರೂ ಇದ್ದಾರೆ. ಶ್ರೀ ಪಾದಂಗಳವರು. ಅನೇಕ ಜಾಹಗೀರಿ ಇನಾಂ ಜಮೀನ ಸಂಪಾದನೆ ಮಾಡಿದ್ದಾರೆ. ಇಂದಿಗೂ ವಂಶಜರು ವೈಶಾಖ ಶು. ೧೫ ಐದುದಿನ ಶ್ರೀ ಗೋಪಾಲಕೃಷ್ಣ ದೇವರ ರಥೋತ್ಸವ ವಿಜೃಂಭಣೆಯಿಂದ ನೆರವೇರಿಸುತ್ತಾರೆ. ಶ್ರೀಗಳವರ ಆರಾಧನೆ ಸಪ್ತಮಿ ಗೋಕುಲಾಷ್ಟಮಿ ಮಾನವಮಿ ೩ ದಿನ ಸಾವಿರಾರು ಬ್ರಾಹ್ಮಣರ ಸಂತರ್ಪಣೆಯಿಂದ ಈಗಲೂ ನಡೆಸುತ್ತಾರೆ.

## ೯೬ ವರ್ಷದಲ್ಲಿ ಆದ ಚರಿತ್ರೆ

೫ ವರುಷ ಬಾಲ್ಯಾವಸ್ಥಾ. ೮ನೇ ವರುಷ ಮುಂಜಿವಿ (ಉಪನಯನ) ೧೮ನೇ ವರುಷ ವಿವಾಹ; ಚಿಕ್ಕಂದಿನಿಂದ ಹೀಗೆ ೩೦ನೇ ವರುಷ ಪರಿಯಂತವಾಗಿ ಜಡಭರತ ರಾಯರಂತೆ ಚರ್ಯ. ಕೆಲಕಾಲ ಹುಡುಗಾಟಿಕೆ ಮಾತಾ

ಪಿತೃಗಳು ಚಿಂತೆಯಿಂದ, (೧೧-೧೨) ವರ್ಷ ವಯಸ್ಕರೂ ಜಾತಾಪರೋಕ್ಷಿಗ ಳಾದ ಶ್ರೀ ಗೋಪಾಲದಾಸರನ್ನು ಕೇಳುವಿಕೆ. ದಾಸರ ಆಜ್ಞೆಯಂತೆ ತಂದೆ ಗಳು ಈ ಐಜಿ ರಾಮಾಚಾರ್ಯರಿಗೆ ಸಕಲ ಶಾಸ್ತ್ರಾಭ್ಯಾಸ ಮಾಡಿಸಿದರು ಚತುಃ ಶಾಸ್ತ್ರದಲ್ಲಿ ಪಂಡಿತರಾಗುವಿಕೆ ನಂತರ ೧೨ ವರುಷ ಅಗ್ನಿಹೋತ್ರವಿಟ್ಟು ಕೊಂಡು ಶ್ರೀ ವ್ಯಾಸ ರಾಜರ ಪ್ರತಿಷ್ಠಿತ ಬೀಚಪಲ್ಲಿ ತಾ|| ಗದ್ವಾಲ ಶ್ರೀ ಪ್ರಾಣದೇವರಲ್ಲಿ ನಿರಂತರ ಸೇವಾ ತಪಸ್ಸು ಪಾಠ ಪ್ರವಚನಾದಿಗಳನ್ನು ಮಾಡಿ ಶ್ರೀ ಪ್ರಾಣದೇವರ ಅನುಗ್ರಹ ಸಂಪಾದಿಸಿ ಅಪರೋಕ್ಷ ಜ್ಞಾನ ಹೊಂದಿ ಪ್ರಾಣ ಪ್ರಸಾದದಿಂದ " ಶ್ರೀ ವಾಸುದೇವ ವಿಠಲ " ಅಂಕಿತವಿಟ್ಟು ಪದಪದ್ಯಗಳನ್ನು ಸುಳಾದಿಗಳನ್ನು ರಚಿಸಿದರು. ನಂತರ ವೇಣಿ ಸೋಮಪುರಕ್ಕೆ ಬರುವಿಕೆ. ೩೬ ವರ್ಷ ಪರಿಯಂತರ ಅಗ್ನಿಹೊತ್ರವಿಟ್ಟುಕೊಂಡೆ ಅನೇಕ ಶಿಷ್ಯ ಸಂಗ್ರಹಿಸಿ (೩) ಮೂರು ವರ್ಷಕ್ಕೊಂದು ಸಲದಂತೆ ೧೨ ಸಾರೆ ಶ್ರೀ ಸುಧಾ ಮಂಗಳ ಮಾಡಿದ್ದು. ಶ್ರೀ ಗೋಪಾಲ ಕೃಷ್ಣದೇವರ ಪ್ರತಿಷ್ಠ ೭೮ ಎಪ್ಪತ್ತೆಂಟು ವರ್ಷ ಗಳಾದವು. ಈ ಅವಧಿಯಲ್ಲೆ ೨ ವರುಷ ವಾನಪ್ರಸ್ಥಾಶ್ರಮ ಕಾಲಕರ್ಮಾನು ಸಾರವಾಗಿ ತಾವು ದೇವಾಂಶರೆಂಬ ಸ್ವರೂಪ ಅಭಿವ್ಯಕ್ತಿಯಾಗಲು ಶ್ರೀ ವರದ ಗೋಪಾಲ ದಾಸರ ವಿಜ್ಞಾಪನೆ, ಮತ್ತು ಶ್ರೀ ಗೋಪಾಲಕೃಷ್ಣನ ಆಜ್ಞೆಯಂತೆ ಶ್ರೀ ಭುವನೇಂದ್ರ ತೀರ್ಥ ಶ್ರೀ ಪಾದಂಗಳವರಲ್ಲಿ ಯತ್ಯಾಶ್ರಮ ಸ್ವೀಕರಿಸಿ ಶ್ರೀ ವ್ಯಾಸತತ್ವಜ್ಞರೆಂಬ ನೂತನ ಜನ್ಮ ಪಡೆದು ಸಾಧನಗೈದುದು. ನಂತರ ೧೮ ವರುಷ ವೇಣಿ ಸೋಮಪುರದಲ್ಲೆ ತಪಸ್ಸು ಗೈಯ್ಯುತ್ತ ೩ ವರ್ಷಕೊಂದು ೬ ಸಲ ಶ್ರೀ ಸುಧಾ ಮಂಗಳ ಮಾಡಿದ್ದು ಅನೇಕ ಗ್ರಂಥಗಳನ್ನು ಸಂಸ್ಕೃತದಲ್ಲೆ ರಚಿಸಿರುವರು. ಇವರ ಮುಖ್ಯ ಶಿಷ್ಯರು ಅಡಿವಿ ಆಚಾರ್ಯರು. (ವಿಷ್ಣು ತೀರ್ಥರು) ಹೀಗೆ ೯೬ ವರುಷದಲ್ಲಿ ಸಜ್ಜನರ ಉದ್ಧಾರ ಗೈದ ಮಹತ್ಮರನ್ನು ಶ್ರೀ ಗೋಪಾಲದಾಸರು ಶ್ರೀ ಜಗನ್ನಾಥದಾಸಾದಿ ಅಪರೋಕ್ಷ ಜ್ಞಾನಿಗಳು ಇವರ ಸ್ತೋತ್ರ ಮಾಡಿದ್ದಾರೆ. ಇವರು ದೇವಾಂಶರೂ ಮಹಾ ಮಹಾತ್ಮೆ ತೋರಿದ ಅಪರೋಕ್ಷ ಜ್ಞಾನಿಗಳು ತ್ರಿಕಾಲಜ್ಞರೆಂಬುದಕ್ಕೆ ಕಿಂಚಿತ್ತಾದರೂ ಸಂದೇಹವಿಲ್ಲ.

---

ಹರಿಃ ಓಂ

## ಐಜಿ ಸ್ವಾಮಿಗಳು ಶ್ರೀವ್ಯಾಸ ತತ್ವಜ್ಞರ ( ಶ್ರೀ ವಾಸುದೇವ ವಿಠಲ )

# ಜೀವನ ಚರಿತ್ರೆ

ಶ್ರೀ ಭಾರತ ಭೂಮಿಯು ಬಂಗಾರದ ಖಣಿಯು. ಜ್ಞಾನಿಗಳ ಸಾಧನಕ್ಕೆ ಉಚ್ಚತರವಾದ ಗಣಿಯು. ಕಲಾ-ಕೌಶಲ್ಯದಿಂದ ತುಂಬಿದ ಶ್ರೇಷ್ಠ ತರಂಗಿಣಿಯು. ದೇವಾಂಶರು ಅಪರೋಕ್ಷ ಜ್ಞಾನಿಗಳಿಂದ ಸೂಸುವ ಸನ್ಮಣಿಯು. ವೀರ ಧೀರ ಶೂರ ಮಾನ್ಯರನ್ನು ಪಡೆದ ರಮಣಿಯು.

## ಹರಿದಾಸ – ಪರಂಪರೆ

ಇಂಥ ರಮಣೀಯವಾದ ಸಾಧನ ಭೂಮಿಯಾದ ಭಾರತ ಬೂಮಿಯಲ್ಲೇ ಹಿಂದೆ ಯುಗ-ಯುಗಾಂತರಗಳಲ್ಲಿ ಅಧರ್ಮ ಪ್ರವೃತ್ತಿಯಾಗಲು ಧರ್ಮ ಸಂಸ್ಥಾಪನಕ್ಕೆ ಭಗವಂತನು ಅವತರಿಸಿದನು. ತನ್ನ ನಿಜಭಕ್ತರಾದ ದಾಸರನ್ನು ಸನ್ಮಾರ್ಗಕ್ಕೆ ತಂದು ಪೊರೆದನು. ಅನಾದಿ ಪರಮ ನಿತ್ಯನಾದ ಈಶನು. ನಿತ್ಯರಾದ ಜೀವರುದಾಸರು. ಈ ದಾಸ ಶಬ್ದದಿಂದಲೇ ಹಿಂದುರಿಗಿ ಓದಲು “ ಸದಾ ” ದಾಸರು ನಿತ್ಯರೆಂಬುವೆ ಸಿದ್ಧಾಂತ. ಜೀವನ ಸ್ವರೂಪ ಭೂತವಾದ ಜ್ಞಾನವೂ ಬುದ್ಧಿಯು ಇವೆರಡೂ ಸಂಗ್ರಹಿಸಿದ ಮತಿಷ್ಠವಾದ ಮತವೂ ಆಯಾಸಾಹಿತ್ಯವೂ ನಿತ್ಯ “ದೇಶಭಾಷೆ ಬೇರೆಯಾದರೂ ಅಲ್ಲಿಪ್ಪ ಪರಮಾತ್ಮ ತತ್ವೇಶರು ಆ ಕಾರ್ಯ ಪ್ರವೃತ್ತಿಸಿ ಆದೇಶ ಜನರನ್ನು ದೇಶ ಭಾಷೆಗಳನ್ನು ರಕ್ಷಿಸುತಿಪ್ಪರು. ಸಕಲ ಭಾಷೆಗಳಾದರೂ ನಿತ್ಯವಾದವು ಆದರೆ ಅದರ ಏರು ಇಳುವಮಾತ್ರ ವಿಚಾರಣೀಯವಾಗಿದೆ.

ಕಲಿಯುಗದಲ್ಲಿ ಶ್ರೀಹರಿಗೆ ಅವತಾರವಿಲ್ಲದ ಕಾರಣ ದೇವರಾಜ್ಞೆಯಂತೆ ಅಧರ್ಮ ದೂರೋಡಿಸಿ ಜ್ಞಾನವಿತ್ತು ಸಜ್ಜನರನ್ನು ಪೊರೆಯಲು ಅನೇಕ ದೇವತೆಗಳು ಅವತಾರ ಮಾಡಿದ್ದಾರೆ. ಉತ್ತರದೇಶದಲ್ಲಿ ಸಂತರು. ಸಾಧುಗಳು, ದಕ್ಷಿಣದಲ್ಲಿ ಶರಣರು. ಹರಿದಾಸರೆಂದು ಪ್ರಸಿದ್ಧರಾಗಿದ್ದಾರೆ.

ನಿತ್ಯವಾದ ಪರಂಪರೆಯಿಂದ ಬಂದ ಹರಿದಾಸ ಸಾಹಿತ್ಯ-ಸಂಸ್ಕೃತವಾಣಿ ಯಲ್ಲಿ ಶ್ರೀ ಮದ್ವಾಚಾರ್ಯರಿಂದಲೇ ಸ್ಥಿರವಾಗಿ ಸ್ಥಾಪಿತವಾಗಿ ಪ್ರಚಾರಕ್ಕೆ ಬಂದಿತು. ಇವರೇ ಹರಿದಾಸರಿಗೆಲ್ಲ ಮೂಲ ಪುರುಷರು.

ಶ್ರೀ ಮದ್ವಾಚಾರ್ಯರ ಸಾಕ್ಷಾತ್ ಶಿಷ್ಯರೂ ಶಾಸ್ತ್ರ ಪಂಡಿತರು ಅಪ ರೋಕ್ಷ ಜ್ಞಾನಿಗಳಾದ ಶ್ರೀ ನರಹರಿ ತೀರ್ಥರೆ ಸಂಸ್ಕೃತ ಭಾವವನ್ನೆ ತಿಳಿಗನ್ನಡ ದಲ್ಲಿ ಕೆಲ ಪದಗಳನ್ನು ರಚಿಸಿ ಕರ್ನಾಟಕ ಹರಿದಾಸ ವರ್ಗಕ್ಕೆಲ್ಲ ಮೂಲ ಪುರುಷರಾದರು. ( ೬೫೦ ವರುಷ ಮುಂಚೆ ಶ್ರೀವಿಜಯದಾಸರ ಸಂಗ್ರಹ ಹಳೇ ಪುಸ್ತಕದಲ್ಲಿ ಶ್ರೀ ನರಹರಿ ತೀರ್ಥರ ಪದಗಳೆಂದು ಬರೆದಿರುವ ಆಧಾರವೇ ಸಾಕು. ) ಇವರನಂತರ (೬೦) ಜನ ಆದ್ಯರು (೯) ಒಂಭತ್ತು ಜನ ಆರಾಧ್ಯರು, ಹರಿದಾಸರಾಗಿದ್ದಾರೆ ಇವರು. ( ೬೦೦ ) ವರ್ಷ ಮುಂಚೆ ಶ್ರೀಟೀಕಾರಾಯರ ಕಾಲದವರೆಂದು ಗೊತ್ತಾಗುತ್ತದೆ. ಏಕಂದರೆ " ಗೋಪಿನಾಥ " ರೆಂಬುವ ಆದ್ಯ ರಲ್ಲಿ ಸೇರಿದ ಹರಿದಾಸರು ಶ್ರೀ ಜಯತೀರ್ಥರ ಸ್ತೋತ್ರ ಮಾಡಿದ್ದಾರೆ, ಶ್ರೀ ವಿಜಯದಾಸರು ಅವರ ತಮ್ಮಂದಿರ ವಾಕ್ಯಗಳುಂಟು ಇವೆಲ್ಲ ಆಧಾರ ನಂಬಲು ಅರ್ಹವಾಗಿವೆ.

ಮುಂದೆ ದೇವಾಂಶರಾದ ಶ್ರೀ ಪಾದರಾಜರು, ಶ್ರೀ ವ್ಯಾಸರಾಜರು, ಶ್ರೀ ಸ್ವಾದಿ ಗುರುರಾಜರು, ತಾವು ಸಂಸ್ಕೃತ ಮಹಾ ಪಂಡಿತರಾಗಿ ಪೀಠಾಧಿ ಪತಿಗಳಾದ ಯತ್ಯಾಶ್ರಮಿಗಳಾದರೂ ಭಗವದಾಜ್ಞೆಯಂತೆ ಹರಿ ಪ್ರಸಾದಾಂಕಿತ ದಿಂದ ಕನ್ನಡದಲ್ಲಿಯೇ ಪದ-ಪದ್ಯ ಸುಳಾದಿ ಉಗಾಭೋಗ ಮುಂತಾದವುಗಳನ್ನು ರಚಿಸಿ ಸಜ್ಜನರನ್ನು ಉದ್ಧಾರ ಗೈದರು. ( ಈ ಮೂವರಂತೆ ಈ ಚರಿತ್ರೆ ನಾಯಕರು. ) ಈ ಮೂವರ ಕಾಲದಲ್ಲಿಯೇ ದೇವಾಂಶರೆ ಜನಿಸಿ ಗ್ರಸ್ಥಾಶ್ರಮಿ ಗಳಾದ ಶ್ರೀ ಪುರಂದರ ದಾಸರು, ಶ್ರೀ ಬೇಲಾಪುರ ವೈಕುಂಠ ದಾಸರು, ಶ್ರೀ ಕನಕದಾಸರು, ಶ್ರೀ ಪುರಂದರದಾಸರ (೪) ಜನ ಮಕ್ಕಳು ಅವತರಿಸಿ ಅನೇಕ ಪದ ಸುಳಾದಿಗಳನ್ನು ರಚಿಸಿದ್ದಾರೆ.

ದಾಸ ಸಾಹಿತ್ಯವೆಲ್ಲ ಹೆಚ್ಚಾಗಿ ಪುರಂದರ ದಾಸರಿಂದಲೇ ಪ್ರಚಾರವಾದಿತು (೪) ನಾಲ್ಕು ಲಕ್ಷ (೨೫) ಇಪ್ಪತ್ತೈದುಸಾವಿರ ಪದಾದಿಗಳನ್ನು ರಚಿಸಿ ದಾಸ ವರ್ಗಕ್ಕೆಲ್ಲ ಮೂಲ ಪುರುಷರೆಂಬಖ್ಯಾತಿ.

ಈ ಕಾಲದನಂತರ ನೂರು-ನೂರಾಇಪ್ಪತ್ತು ವರುಷ ಅವಧಿಯಲ್ಲಿ ಕೆಲ ಜನರು ಹರಿದಾಸರಾಗಿರುವರೆಂದು ವಿಜಯ ದಾಸರ ತಮ್ಮಂದಿರೂ ಶಿಷ್ಯರೂ ಅಪರೋಕ್ಷಿ ಜ್ಞಾನಿಗಳೂ ಆದ "ಹಯವದನ ವಿಟ್ಠಲರು" "ಸಂತರನು ನೆನಿಸಿರೋ" ಎಂಬ ಪದದಲ್ಲಿ ಹೇಳಿದ್ದಾರೆ. ( ನಮ್ಮ ಪ್ರಕಟನೆ ೨೬ ನೋಡಿರಿ. )

ನಂತರ ೧೬೦೪ ಶಾಲಿವಾಹನ ಶಕೆಯಲ್ಲಿ ಶ್ರೀ ವಿಜಯ ದಾಸರು ಅವತಾರ ಮಾಡಿ ಹೆಚ್ಚಿನಪದ ಸುಳಾದಿಗಳನ್ನು ಮಾಡಿ ಜನರನ್ನು ಉದ್ಧಾರಗೈಸಿದರು. ( ನಮ್ಮ ಮಂಡಲ ೧೧-೧೨ ನೇ ಪುಷ್ಪವಾಗಿ ೭೧೨ ಪುಟದಲ್ಲಿ ಸವಿಸ್ತಾರ ಚರಿತ್ರೆ ಅಚ್ಚಾಗಿದೆ.

ಇದೇ ಸ್ವಲ್ಪಕಾಲ ಮುಂಚಿತವಾಗಿ ಅಪರೋಕ್ಷ ಜ್ಞಾನಿಗಳಾದ ಶ್ರೀಪ್ರಸನ್ ವೆಂಕಟದಾಸರು ಅವತರಿಸಿ ಹರಿದಾಸ ಸಾಹಿತ್ಯ ವಿಶೇಷವಾಗಿ ಪ್ರಚಾರ ಮಾಡಿದ್ದಾರೆ.

ಶ್ರೀ ವಿಜಯದಾಸರ ಶಿಷ್ಯರಾದ ( ೩೦ ) ಜನ ಅಪರೋಕ್ಷಿ ಜ್ಞಾನಿಗಳಾಗಿದ್ದಾರೆ. ಅದಲ್ಲಿ ಶ್ರೀ ಗೋಪಾಲ ವಿಠಲ, ಮೋಹನ ವಿಠಲರು, ವೇಣು ಗೋಪಾಲ ವಿಠಲ, ಹಯವದನ ವಿಠಲರಾಗಿದ್ದಾರೆ. ಇವರ ಶಿಷ್ಯ ಪ್ರಶಿಷ್ಯ ಅಪರೋಕ್ಷ ಜ್ಞಾನಿಗಳ ವರ್ಗವೇ ಮುಂದುಸಾಗಿದೆ.

## ಹರಿದಾಸರು ಅವತರಿಸಿದ ಕ್ಷೇತ್ರ

ಶ್ರೀ ಪುರಂದರದಾಸರು ಮೊದಲು ಮಾಡಿಕೊಂಡು ಎಲ್ಲ ಅಪರೋಕ್ಷ ಜ್ಞಾನಿಗಳ ಅವತಾರ ನಿವಾಸ ಪುಣ್ಯ ಭೂಮಿ ಕೃಷ್ಣಾ ತುಂಗಾ ಮಧ್ಯಪ್ರದೇಶವಾಗಿದೆ. ಅದರಲ್ಲಿ ಮೊದಲು ಹೈದರಾಬಾದ ರಾಜ್ಯಕ್ಕೆ ಸೇರಿದ ರಾಯಚೂರ ಜಿಲ್ಹೆಯಲ್ಲಿ ಶ್ರೀ ವಿಜಯದಾಸರು ಗೋಪಾಲದಾಸರು ಈ ವಾಸುದೇವ ವಿಠಲರು, ಗುರು ಗೋಪಾಲ ದಾಸರು, ವರದ ಗೋಪಾಲದಾಸರು, ಶ್ರೀ ಜಗನ್ನಾಥ ದಾಸರು ಶ್ರೀ ಪ್ರಾಣೇಶ ಗುರು ಪ್ರಾಣೇಶ ದಾಸರು. ಕೊನೆಯವರಾದ ಮೊದಲಕಲ್ ಶೇಷದಾಸರು ಈ ಅಪರೋಕ್ಷ ಜ್ಞಾನಿಗಳು ಅವತರಿಸಿದ ಪುಣ್ಯತಮ ಕ್ಷೇತ್ರವಿದು.

ಈ ಕ್ಷೇತ್ರವು ಪ್ರಸಿದ್ಧವಾಗಲು ಕಾರಣವೇನಂದರೆ ಶ್ರೀ ವೆಂಕಟೇಶನು ಶ್ರೀ ರುದ್ರದೇವರ ತಪಸ್ಸಿಗೆ ಒಲಿದು " ಆದಿಶಿಲಾ ಮೊದಲಕಲ್ ಕ್ಷೇತ್ರದಲ್ಲಿ ಸ್ವಂಯವ್ಯ ಕ್ತನಾಗಿದ್ದಾನೆ. ಎಲ್ಲ ಸೇವಕರಾದ ದೇವತೆಗಳಿಗೆ ಅವತಾರಮಾಡಿ ತನ್ನ ಸೇವಾ ಮಾಡಿ ಸಜ್ಜನರನ್ನು ಉದ್ಧಾರ ಗೈಸಿರೆಂದು ಆಜ್ಞಾ ಮಾಡಿದ್ದಾನೆಂದು " ಆದಿಶಿಲಾ ಕ್ಷೇತ್ರ ಮಹಾತ್ಮೆ " ಬ್ರಹ್ಮಾಂಡ ಪುರಾಣ ವಚನ ಸ್ಪಷ್ಟವಾಗಿದೆ ಕಾರಣ ಇಂಥ ಪುಣ್ಯತಮವಾದ ಸುಕ್ಷೇತ್ರ ಭೂಮಿಯಲ್ಲೇ ದಾಸರೆಲ್ಲ ಅವತರಿಸಿದ ಮುಖ್ಯ ಕಾರಣ. ಸಾಕ್ಷಾತ್ ಭೃಗು ಋಷಿಗಳಾದ ಶ್ರೀ ವಿಜಯ ದಾಸಾರ್ಯರ ಅವತಾರ ಮಾನ್ವಿ ತಾಲೂಕ ಚೀಕಲಪರಿವಿಯಲ್ಲಿ ೧೬೦೪ ಶಕೆಯಲ್ಲಿ ಆಗಿದೆ. ಅವರ ಸಾಧನ ನಡೆದದೆ.

ಇತ್ತ ೧೬೨೬ ಶಕದಲ್ಲಿ ಈ ನಮ್ಮ ಪುಣ್ಯಾತ್ಮರೂ ದೇವಾಂಶರೂ ಚರಿತ್ರಕಾರ ಅವತಾರ ಐಜಿ ತಾ|| ಗದ್ವಾಲದಲ್ಲಿ ಆಗಿದೆ. ಇವರು (೩೦) ವರ್ಷ ಪರಿಯಂತ ಮುಗ್ಧಭಾವದಲಿದ್ದಾರೆ.

ಅತ್ತ ದೇವದುರ್ಗ ತಾ|| ಮೊಸರಕಲ್ಲಲ್ಲಿ ಶ್ರೀ ಗೋಪಾಲದಾಸರ ಜನನ ೧೬೪೪ ಶಾ. ಶಕೆಯಲ್ಲಿ ನಂತರ ೪–೫ ವರ್ಷದಲ್ಲೆ ಅವರ ತಮ್ಮಂದಿರಾದ (೩) ಮೂರು ಜನರ ಅವತಾರ ನಂತರ ಸಂಕಾಪುರ ಉತ್ತನೂರ ಪ್ರಯಾಣ. ಹೀಗೆಲ್ಲ ದೇವಾಂಶರ ಅವತಾರ ಲೋಕೋದ್ಧಾರಕ್ಕೆ ಕಾರಣರಾಗಿದ್ದಾರೆ. ಅಪರೋಕ್ಷ ಜ್ಞಾನಿಗಳು ಗುಂಪು ಸೇರಿದ ಆ ಮಹಾ ಪುಣ್ಯಕಾಲವನು ನಾವೆಂದಿಗೀಕ್ಷಿಸುವ. ಆಗಲಿ ಈಶನ ಇಚ್ಛೆ ಅಂಥ ಪುಣ್ಯಾತ್ಮರ ಸ್ಮರಣೆ ಅವರ ಗುಣಗಾನ ಮಾಡುವದೇ ಸಜ್ಜನರ ಮಹಾಭಾಗ್ಯ.

ಪ್ರತಿಯೊಬ್ಬ ದೇವಾಂಶರ ಅವತಾರಕ್ಕೆ ಮುಖ್ಯವಾದ ಕಾರಣಗಳಿವೆ. ಅವುಗಳನ್ನೆಲ್ಲ ಅವರವರ ಚರಿತ್ರೆಯಲ್ಲಿ ವಿಶದವಾಗಿ ಮುಂದೆ ಬರುವದು. ಶ್ರೀ ವಿಜಯದಾಸರ ಚರಿತ್ರೆ ನಂತರ ಶ್ರೀ ಗೋಪಾಲದಾಸರಚರಿತ್ರೆ ಪ್ರಕಟಿಸುವದು ವಾಸ್ತವ್ಯ. ಆದರೆ ಜಾತಾ ಅಪರೋಕ್ಷಗಳಾದ ಶ್ರೀ ಗೋಪಾಲದಾಸರೆ " ಕಂಡೆ ಕರುಣಿಗಳೊಳಗೆ ಪಂಡಿತ ರಾಮಾರ್ಯರಾ " ಎಂದು ಸ್ತೋತ್ರ ಮಾಡಿದ ಕಾರಣ ಐಜಿ ಶ್ರೀ ವೆಂಕಟರಾಮಾರ್ಯರ ಎಲ್ಲ ಕೃತಿಗಳು ಚರಿತ್ರೆಯು ತಿಳಿ

ದಷ್ಟು, ಈ ಸಕಾಲದಲ್ಲಿ ಸಜ್ಜನರ ಮುಂದಿಡಲಾಗಿದೆ. ಸಜ್ಜನರು ಹಂಸ ಕ್ಷೀರ ನ್ಯಾಯದಂತೆ ಸ್ವೀಕರಿಸಿ ತಪ್ಪುಗಳು ತಿಳಿಸುವದಾಗಿ ಮೊದಲಿಗೆ ಪ್ರಾರ್ಥಿಸುತ್ತೇನೆ.

## ಪುಣ್ಯಪುರುಷರ ಚರಿತ್ರೆ ಹೇಗಿರಬೇಕು ?

ಒಬ್ಬ ಮಹಾತ್ಮರು ಪುಣ್ಯಪುರುಷರ ಚರಿತ್ರೆ ಸಂಗ್ರಹಿಸಬೇಕಾದರೆ ಆ ಮಹಾತ್ಮರು ಯಾರು. ಯಾವ ಪುಣ್ಯ ಭೂಮಿಯಲ್ಲಿ ಏನು ಕಾರಣ ಅವತರಿಸಿದರು. ಯಾವ ದೇಶ ಯಾವ ಕಾಲ ಮಾತಾಪಿತೃಗಳ ವಿಚಾರ ಜನನ, ಜನನ ಕಾಲದಲ್ಲಿಯ ದೇಶ ಪರಿಸ್ಥಿತಿ. ಜನನ ಮಹಾದರ್ಶಾ ಜನ್ಮ ಸಂಸ್ಕಾರ ಬಾಲ್ಯ, ವಿದ್ಯಾಭ್ಯಾಸ, ಚೌಲ, ಉಪನಯನ, ವಿಶೇಷವಾದ ವಿದ್ಯಾಭ್ಯಾಸ, ಅವರ ಸ್ವಭಾವ ಗುಣ ಕರ್ಮಾಚರಣೆ, ವಿವಾಹ, ಗೃಹಧರ್ಮ, ಶಿಷ್ಯ ಸಂಪತ್ತು, ಪಾಠಪ್ರವಚನ, ಶಾಸ್ತ್ರಾಪರೋಕ್ಷ. ಅವರು ಆಚರಿಸಿದ ಪ್ರತಿಯೊಂದು ಕಾರ್ಯಮಹತ್ಮೆ, ಅವರ ಜ್ಞಾನ ಭಕ್ತಿ ವೈರಾಗ್ಯ, ಗ್ರಂಥಗಳ ವಿವರ ಸಾಹಿತ್ಯ ವಿಮರ್ಶೆ. ಮಹಾ ಮಹಾ ಮಹಾತ್ಮೆ ಸಜ್ಜನರನ್ನು ಸನ್ಮಾರ್ಗಕ್ಕೆ ತಂದ ಲೋಕೋಪಕಾರ ಇತ್ಯಾದಿ ಅನೇಕ ವಿಷಯಗಳು. ಐತಿಹಾಸಿಕ ಸಂಶೋಧನಾದಿಂದ ಬರೆಯಬೇಕಾದರೆ ಲೇಖಕನ ಭಾಷಾಭಿಜ್ಞತೆ ಭಾಷಾ ರುಚಿ ಮುಂತಾದವುಗಳು ಬೇಕಲ್ಲದೇ.

ಆ ಮಹಾತ್ಮರು ಅವತರಿಸಿದ ದೇಶದವರ, ಅವರ ಕುಲ ಪರಂಪರೆ ಬಂದ ಬಂದ ವಾರ್ತೆಗಳು ೧ ಆದೇಶ ಜನರು ಕುಲಪರಂಪರೆಯವರಿಂದ ಮುಖ್ಯವಾಗಿ ತಿಳಿಯಬೇಕಾದುದ್ದು. ೨ ಇದಲ್ಲದೆ ಸ್ವತಃ ಆಜ್ಞಾನಿಗಳು ಸ್ವತಃ ತಮ್ಮ ಪದ ಪದ್ಯಗಳಿಂದ ಆತ್ಮಕಥನ ಮಾಡಿದ್ದು. ಮುಖ್ಯವಾದದ್ದು. ೩ ಮತ್ತು ಅವರ ಶಿಷ್ಯರು ತಮ್ಮ ಗುರುಗಳ ಮಹತ್ಮೆ ಕೊಂಡಾಡಿದ್ದು. ೪ ಇದೂ ಅಲ್ಲದೇ ಪರಂಪರಾಗತ ಸಂಪ್ರದಾಯ ಪ್ರವರ್ತಕರಿಂದ ಬಂದ ನಿಜವಾರ್ತೆಗಳು ಸಹ ನಂಬಲರ್ಹವಾಗಿವೆ.

ಹೀಗೆ ಚರಿತ್ರಕಾರರ ಚರಿತ್ರೆಗಳನ್ನು ನಾಲ್ಕು ವಿಧವಾಗಿ ಸಾಧಿಸಿ ಬರೆಯುವದೇ ಮುಖ್ಯ. ಆಪ್ತ ವಾಕ್ಯ ಪ್ರಾಮಾಣ್ಯ ಪ್ರತ್ಯಕ್ಷ ನೋಡಿದವರ

ಪರಂಪರಾಗತ ವಾರ್ತೆಗಳು ಸಹ ಪ್ರಮಾಣ. ಇವೆಲ್ಲ ಆಧಾರಗಳ ಮೇಲಿಂದ ನಮ್ಮ ಗುರುಗತನಾದ ಶ್ರೀ ಹರಿಯು ಸಂಶೋಧಿಸಿ ತಿಳಿವಷ್ಟರಲ್ಲಿ ಕಿಂಚಿತು ವಿಜ್ಞಾಪಿಸುವೆನು.

## ಜೀವನ ಚಠಿತ್ರೆ ಪ್ರಾರಂಭ

೧೮ನೇ ಶತಮಾನದಲ್ಲಿ ರಾಯಚೂರು ತಾಲ್ಲೂಕು ದಿನ್ನಿ ಎಂಬ ಗ್ರಾಮದಲ್ಲಿ ಪುಣ್ಯವಂತರೂ ಸದಾಚಾರ ಸಂಪನ್ನರು ಚತುಃಶಾಸ್ತ್ರ ಪಂಡಿತರು ಮಹತ್ಮರೂ ಆದ ಶ್ರೀ ಜನಾರ್ದನಾಚಾರ್ಯರೆಂದು ವಾಸಿಸುತ್ತಿದ್ದರು. ಇವರು ಆ ದಿನ್ನಿ ಗ್ರಾಮದ ಜೋಯಿಸರು ಇವರ ಮಕ್ಕಳು ಶ್ರೀ ವೆಂಕಟ ನೃಸಿಂಹಾಚಾರ್ಯರು. ಇವರೂ ಸಹ ತಮ್ಮ ತಂದೆಗಳಲ್ಲಿ ಓದಿ ಸಕಲ ಶಾಸ್ತ್ರಗಳಲ್ಲಿ ಪಾಂಡಿತ್ಯಸಂಪಾದಿಸಿ ಪಂಡಿತ ಶ್ರೇಷ್ಠರಾದರು. ಕಾಲಾನುಸರಿಸಿ ಶಿಷ್ಯರಪ್ರಾರ್ಥನೆ ಸಜ್ಜನರ ಉದ್ಧಾರಗೋಸುಗವಾಗಿ ಐಜಿಗ್ರಾಮ ತಾಲ್ಲೂಕು ಗದ್ವಾಲಿಗೆ ಬಂದು ವಾಸಮಾಡಿದರು. ಇವರು ಆಪಸ್ತಂಭ ಶಾಖೆಯ ಕೌಶಿಕ ಗೋತ್ರಜರು ಗದ್ವಾಲ ಸಂಸ್ಥಾನದಿಂದ ಇವರಿಗೆ ಬಹು ಮರ್ಯಾದೆ. ಐಜಿಗೆ ಬಂದಮೇಲೆ ಕೆಲಕಾಲ ಮಕ್ಕಳಾಗಿದ್ದಿಲ್ಲ. ಐಜಿಗೆ ೨ ಮೈಲಿನಲ್ಲಿದ್ದ ಉತ್ತನೂರು ಗ್ರಾಮವಿದೆ. ಅಲ್ಲಿದ್ದ ಶ್ರೀ ವೆಂಕಟೇಶನನ್ನು ಮತ್ತು ಆದಿಶಿಲಾಸ್ಥ ವೆಂಕಟನನ್ನು ವೆಂಕಟನೃಸಿಂಹಾಚಾರ್ಯರು ಸೇವಿಸಿ ವೆಂಕಟಗಿರಿಯಾತ್ರೆ ಮಾಡಿಕೊಂಡು ಬಂದರು. ಶ್ರೀ ವೆಂಕಟನ ವರಪ್ರಸಾದದಿಂದಲೇ ಇವರ ಕುಟುಂಬ ಗರ್ಭಿಣಿಯಾಗಿ ಒಬ್ಬ ಪುತ್ರರತ್ನವನ್ನು ಐಜಿಯಲ್ಲೇ ಪಡೆದರು. ಇವರೆ ನಮ್ಮ ಚರಿತ್ರೆನಾಯಕರು. ಇವರ ತಾಯಿಯ ಹೆಸರು ಗೊತ್ತಾಗಿಲ್ಲ.

ಇವರ ಜನನ ಸುಮಾರು ಶಾ. ಶಕೆ ೧೬೨೬ ರಲ್ಲಿ ಆಗಿದೆಂದು ಶ್ರೀ ಜಗನ್ನಾಥ ದಾಸಾರ್ಯರ ವಚನ ( ೯೬ ವರ್ಷ ಜೀವಿಸಿದ್ದು ರೌದ್ರಿ ಸಂ॥ ಶಾ. ಶಕೆ ೧೭೨೨ ರಲ್ಲಿ ವೈಕುಂಠಯಾತ್ರೆ ಮಾಡಿದರೆಂದಮೇಲೆ ೯೬ ಕಳೆಯಲು ಶಾ. ಶಕೆ ೧೬೨೬ ರೇ ಆಗುತ್ತದೆ. ಇತರ ಸನದುಗಳಮೇಲಿಂದಲೂ ಗೊತ್ತಾಗುತ್ತದೆ.

ಇವರು ಅವತಾರ ಮಾಡಲು ಕಾರಣವೇನಂದರೆ ದ್ವಾಪರಯುಗದಿ ಅಗ್ನ್ಯಂಶ ಸಂಭೂತರಾದ ಧೃಷ್ಟದ್ಯುಮ್ನನು ಸಮಾಧಿಗಸ್ತರಾದ ದ್ರೋಣಾ

ಚಾರ್ಯರ ದ್ವೇಷವನ್ನು ವೃಥಾ ಛೇದನಮಾಡಿದ ಪಾಪದಿಂದ ಪ್ರಾರಬ್ಧ ವಶಾತ ಕಲಿಯುಗದಲ್ಲಿ ಮೂರು ಜನ್ಮ ತೆತ್ತಬೇಕಾದೀತು. ಮೊದಲಿಗೆ ಶ್ರೀ ವ್ಯಾಸ ರಾಜರ ಮಠದಲ್ಲಿ ಶ್ರೀನಿವಾಸ ತೀರ್ಥರು "ಗುರುಕೃಷ್ಣ" ನೆಂಬ ಅಂಕಿತ ಪಡೆದು ಪ್ರಸಿದ್ಧ ರಾಗಿದ್ದಾರೆ. ನಂತರ ೨ನೇ ಜನ್ಮ ಉತ್ತರಾದಿ ಮಠದಲ್ಲಿ ಶ್ರೀಕೃಷ್ಣದ್ವೈಪಾಯನ ಸ್ವಾಮಿಗಳವರು. ಇವರು ತಾವು ಪರಲೋಕಯಾತ್ರೆಗೆ ವಿಮಾನಾರೂಢರಾಗಿ ತೆರಳುವಾಗ್ಗೆ ಕುಂಭ ಕೋಣದಲ್ಲಿ ಪಾಠ ಪ್ರವಚನ ಮಾಡುತ್ತ ಶಿಷ್ಯಸಮೇತ ಕುಳಿತಿದ್ದ ಶ್ರೀ ಮಂತ್ರಾಲಯ ಪ್ರಭುಗಳಾದ ಶ್ರೀ ರಾಘವೇಂದ್ರ ಗುರುರಾಜರಿಗೆ ಸಂದರ್ಶನವಿತ್ತು ಸಾಂಕೇತ ತೋರಿದ ದೇವಾ ವಂಶರಿವರು. ಆ ಕೃಷ್ಣದ್ವೈಪಾಯನ ಶ್ರೀಗಳವರ ಅವತಾರವೆ ಇವರ ಮೂರನೇ ಜನ್ಮವೆಂದು ಶ್ರೀವರದ ಗೋಪಾಲದಾಸರೂ ಶ್ರೀ ಜಗನ್ನಾಥದಾಸರ ವಚನಗಳ ವಿದೆ. ಇನ್ನೂ ಆಧಾರವಿವೆ.

ಇಂತು ಅವತಾರ ಮಾಡಿದ ಮಹಾತ್ಮರ ಜನನವಾದ ಕೂಡಲೇ ಸತ್ ಸಂಪ್ರದಾಯದಂತೆ ವಿಧಿ ಪೂರ್ವಕವಾಗಿ ಜಾತ ಕರ್ಮಗಳನ್ನು ಮಾಡಿ ತಂದೆ ಗಳಾದ ಶ್ರೀವೆಂಕಟ ನೃಸಿಂಹಾಚಾರ್ಯರು **ಈ ಕೂಸಿಗೆ ಶ್ರೀ ವೆಂಕಟ ರಾಮಾರ್ಯರೆಂದು** ನಾಮಕರಣ ಮಾಡಿದರು.

ಪುಟ್ಟುತಲೆ ಶಿಶುವಿನ ಮುಖವಿಕಾಸವು ನೋಡಿ ಈ ಶಿಶುವು ಮಹಾಪುಣ್ಯ ಪುರುಷನೆಂದು ತಂದೆ ತಾಯಿಗಳು ಇತರ ಜ್ಞಾನಿಗಳು ಭಾವಿಸಿದರು.

ಲೋಕರೀತ್ಯಾ **ವೆಂಕಟ ರಾಮಾರ್ಯರ** ಲಾಲನೆ ಪಾಲನೆ ಬಾಲ ಲೀಲಾ ನಡೆದವು. ಜನಮುದ್ದಾದ ಕೂಸಿನನ್ನು ಲೋಕರು ಹೊಗಳಹತ್ತಿದರು. ೫ ವರ್ಷದಲ್ಲೆ ವಿದ್ಯಾಭ್ಯಾಸ ಪ್ರಾರಾಂಭವಾದೀತು. ಕಾಲಾನುಗುಣ ಪ್ರಾರಬ್ಧ ಕರ್ಮವಶಾತ್ ಪೂರ್ವ ವಯಸ್ಸಿನಲ್ಲೆ ಹೆಚ್ಚಿನ ವಿದ್ಯಾಲಭಿಸಲಿಲ್ಲ ಮುಗ್ಧರಂತೆ ಪ್ರವರ್ತಿಸಲಾರಂಭಿಸಿದರು.

ಶ್ರೀ ವೆಂಕಟರಾಮಾರ್ಯರಿಗೆ ೮ ವರ್ಷಗಳಾದವು. ವಿಧಿ ವತ್ತಾಗಿ ಶ್ರೀ ವೆಂಕಟ ನೃಸಿಂಹಾಚಾರ್ಯರು ಇವರಿಗೆ ಉಪನಯನಮಾಡಿ ಗಾಯತ್ರೀ

ಮಂತ್ರೋಪದೇಶದಿಂದದ್ವಿಜನ್ಮನಾದ ಬ್ರಾಹ್ಮಣೋತ್ತಮನನ್ನಾಗಿ ಮಾಡಿದರು. ಉಪನಯನಾನಂತರದಲ್ಲಿಯೂ ಬ್ರಹ್ಮಚಾರ್ಯಾಶ್ರಮವನ್ನು ಮುಗ್ಧ ತನದಿಂದಲೇ ಸರಿಯಾಗಿ ಪಾಲಿಸಿದರು. ಆ ಬ್ರಹ್ಮಚರ್ಯದಲ್ಲಿ ಯಾವ ಕುಂದು ಕೊರತೆಗಳು ಬರಲಿಲ್ಲ ಹೀಗೆ ೧೦ ವರ್ಷಗಳ ಪರಿಯಂತರವಾಗಿ ಆಶ್ರಮೋಚಿತ ಕರ್ಮಗಳನ್ನು ತಂದೆಗಳ ಆಜ್ಞೆಯಂತೆ ಆಚರಿಸುತ್ತಲಿದ್ದರು. ಅನೇಕ ಹುಡುಗರಿಂದ ಕೂಡಿ ಹುಡುಗಾಟಿಕೆ ಕೆಲ-ಕಾಲ ಜಡ ಭರತರಂತೆ ಪ್ರವರ್ತಿಸಹತ್ತಿದರು. ವಿದ್ಯಾಭ್ಯಾಸಕಡಿಗೆ ಲಕ್ಷ ಹೋಗದು. ತಂದೆಗಳಾದ ಶ್ರೀವೆಂಕಟ ನೃಸಿಂಹಾಚಾರ್ಯರು ಚಿಂತೆಯಲ್ಲಿ ಮುಳುಗಿದವರಾದರು. ಹುಡುಗ ೧೪ ವರ್ಷದ ವಯಸ್ಕನಾಗಿದ್ದಾನೆ. ಇನ್ನು ಗ್ರಹಧರ್ಮದಲ್ಲಿಯಾದರೂ ನಿಪುಣನನ್ನಾಗಿ ಮಾಡಬೇಕೆಂದು ಶ್ರೀ ವೆಂಕಟರಾಮಾರ್ಯರ ವಿವಾಹವನ್ನು ೧೬ನೇ ವರುಷದಲ್ಲಿ ಸುಕನ್ಯೆಯೊಡನೆ ಐಜಿಯಲ್ಲೇ ವಿಜೃಂಭಣೆಯಿಂದ ಮಾಡಿದರು. ಪಂಡಿತ ಶ್ರೇಷ್ಠರೆಲ್ಲರೂ ಆಗಮಿಸಿ, ಶ್ರೀ ವೆಂಕಟರಾಮಾರ್ಯರು ಅವರ ಕುಟುಂಬಕ್ಕೆ ಮಂಗಲಾಶಿಷವನ್ನು ಮಾಡಿದರು. ನಾಲ್ಕು ದಿನ ಅತಿ ವೈಭವದಿಂದ ಲಗ್ನವಾದಿತು. ಬ್ರಾಹ್ಮಣ ಅನ್ನಸಂತರ್ಪಣೆಯಾಯಿತು. ತಂದೆಗಳಾದ ಶ್ರೀ ವೆಂಕಟನೃಸಿಂಹಾಚಾರ್ಯರು ಅವರ ಕುಟುಂಬವು ಮಗನ ಮದುವೆ ಮಾಡಿ ಕೃತಾರ್ಥರಾದರೆಂದು ಸಜ್ಜನರು ಹೊಗಳಿದರು.

೪-೬ ವರ್ಷದಲ್ಲೆ ಸೊಸೆಯಾದ ಶ್ರೀ ವೆಂಕಟರಾಮಾರ್ಯರ ಧರ್ಮಪತ್ನಿ ಪುಷ್ಪವತಿಯಾಗಿ ಮನೆಗೆ ಬಂದು ಗ್ರಹಧರ್ಮ ಪಾಲನೆ ಮಾಡುತ್ತ ಪತಿಗಳು ಅತ್ತೆಮಾವಂದಿರ ಸೇವೆ ಮಾಡಹತ್ತಿದಳು (ಇವರ ಕುಟುಂಬದ ಹೆಸರು ಗೊತ್ತಾಗಲಿಲ್ಲ.)

ಇತ್ತ ಗ್ರಹಧರ್ಮ ನಡೆದರೂ ಐಜಿ ವೆಂಕಟರಾಮಾರ್ಯರು ತಮ್ಮ ಮುಗ್ಧ ಭಾವವನ್ನು ಬಿಡಲಿಲ್ಲ. ಹುಚ್ಚರಂತೆ ಆಟ ಇತ್ಯಾದಿಗಳನ್ನು ನೋಡಿ ತಂದೆ ತಾಯಿಗಳಿಗೆ ಮಗನು. ಶಾಸ್ತ್ರಾಭ್ಯಾಸ ಮಾಡಲಿಲ್ಲ. ಬುದ್ಧಿವಂತನಾಗಲಿಲ್ಲೆಂಬ ಬಹು ಚಿಂತೆಯೊಳಗಾದರು. ಶ್ರೀ ವೆಂಕಟನೇ ನೀನೆ ಗತಿ ಎಂದು ಶ್ರೀ ಹರಿಯನ್ನೆ ಮೊರೆ ಪೋಗಹತ್ತಿದರೂ ಏನು ಉಪಾಯ ತೋರಲಿಲ್ಲ.

ಪ್ರಾರಬ್ಧಾನುಭೋಗ ತೀರಲಿಕ್ಕೇಬೇಕು. ಅದಕ್ಕೆ ಕಾಲವೂ ಬೇಕು ತಕ್ಕ ಜ್ಞಾನಿಗಳ ಸಹವಾಸವೂ ಬೇಕು ಅಲ್ಲಿಯವರೆಗೆ ಹರಿ ಇಚ್ಛೆಯಂತೆ ಮುಗ್ಧ ರಾಗಿಯೇ ಇದ್ದರು. ಸುಮಾರು ೩೦ ವರ್ಷಗಳಾದವು ಲೋಕದ ಜನರಲ್ಲಿ ಅಪ ಹಾಸ್ಯಕ್ಕೆ ಕಾರಣರಾದೆವೆಂದು ತಂದೆ-ತಾಯಿಗಳು ಹೆಚ್ಚಿನಚಿಂತೆಗೆ ಒಳಗಾದರು.

ಇತ್ತ ಕಡಿಗೆ ಜಾತಾ ಪಕ್ಷಿಗಳಾದ ಭಾಗಣ್ಣದಾಸರು ೩ ಜನ ತಮ್ಮಂದಿರೂ ತಾಯಿಯೊಡನೆ ಉತ್ತನೂರಲ್ಲಿ ಇದ್ದಾರೆ. ೭ ನೇ ವರುಷದಿಂದ ಭಾಗಣ್ಣನವ ರಾದ (ಗೋಪಾಲ ದಾಸರಿಗೆ ಜಾತಾಪರೋಕ್ಷ) ಲೋಕರಿಗೆ ಹಿಂದಿನ-ಮುಂದಿನ ಜನ್ಮಗಳ ವೃತ್ತಾಂತ ಪೇಳುತ್ತ ಉತ್ತನೂರಲ್ಲಿ ಶ್ರೀ ವೆಂಕಟೇಶನ ಸೇವಾದಲ್ಲಿ ತತ್ಪರರಾಗಿ ಉತ್ತನೂರು ಕ್ಷೇತ್ರದಲ್ಲಿ ವಾಸ ಮಾಡಿದ್ದರು. ಆ ಭಾಗಣ್ಣನವರ ಲೋಕದಲ್ಲಿ ಬಹು ಪ್ರಸಿದ್ಧವಾಗಿದೆ.

ಉತ್ತನೂರು ಐಜಿಗೆ ೨ ಮೈಲಿನಲ್ಲಿದೆ. ಸಮೀಪದಲ್ಲೇ ಮಹಾತ್ಮರಾದ ಭಾಗಣ್ಣನವರಿದ್ದಾರೆ. ಮಗನ ವಿಷಯವಾಗಿ ಅವರಲ್ಲಿಹೋಗಿ ಏನೆಂದು ಕೇಳಿ ಕೊಂಡು ಬರಬೇಕೆಂದು ಶ್ರೀ ವೆಂಕಟರಾಮಾರ್ಯರ ತಾಯಿಯು ತಮ್ಮ ಪತಿಗಳಾದ ವೆಂಕಟ ನೃಸಿಂಹಾರ್ಯರಿಗೆ ಪದೇ ಪದೇ ವಿಜ್ಞಾಪಿಸುತ್ತಾಳೆ. ಆದರೂ ಸಂಣವರಾದ ಭಾಗಣ್ಣದಾಸರು ಏನು ಹೇಳುತ್ತಾರೆ. ನಾವು ಮಹಾ ಪಂಡಿತರು ಅವರಲ್ಲಿ ಹೋಗಿ ಏನು ಕೇಳುವದೆಂದು ಬಹು ಅವಹೇಲನ ಮಾಡುತ್ತಾರೆ. ಪತ್ನಿಯು ಪುನ-ಪುನಃ ವೇಳೆ ಸಾಧಿಸಿ ಪತಿಯನ್ನು ಪ್ರಾರ್ಥಿ ಸುತ್ತಾಳೆ. ಒಂದುದಿನ ರಾತ್ರಿ ಹಟಹಿಡಿದು ನಾಳೇ ಪ್ರಾತಃಕಾಲಕ್ಕೆ ಭಾಗಣ್ಣ ನವರಲ್ಲಿಹೋಗಿ ಬರಬೇಕೆಂದು ಹಟಹಿಡಿದಳು. ಬೆಳಗು ಝಾವ ಎದ್ದು ತಂದೆ ಗಳಾದ ವೆಂಕಟ ನೃಸಿಂಹಾಚಾರ್ಯರು ಸ್ನಾನಾನ್ಹೀಕಗಳನ್ನು ಮಾಡಿದ್ದಾರೆ. ಧರ್ಮ ಪತ್ನಿಯವರು ದೊಡ್ಡವರ ದರ್ಶನಕ್ಕಾಗಿ ಬರಿಗೈಲೆ ಹೋಗಬಾರದೆಂದು (೨) ಉತ್ತತ್ತಿ ಆಚಾರ್ಯರ ಸೆರಗಿನಲ್ಲಿ ಕಟ್ಟುತ್ತಾಳೆ. ಆಚಾರ್ಯರು ತುಳಸಿ ತರುವ ನೆವಮಾಡಿ ಕೈಲಿ ಉದ್ದಿದ ತಂಬಿಗೆ ಹಿಡಿದು ಉತ್ತನೂರಿಗೆ ಹೊರಟರು. ಆದರೂ ಮನಸ್ಸಿನಲ್ಲಿ ಭಾಗಣ್ಣನವರಲ್ಲಿ ಪೋಗಲು ಮರ್ಯಾದೆ ಸಾಲದು.

ಅಂತೂ ಸ್ವಲ್ಪ ಕಾಲದಲ್ಲಿಯೇ ಉತ್ತನೂರಿಗೆ ಮುಟ್ಟಿ ಶ್ರೀ ವೆಂಕಟೇಶನ ದರ್ಶನ ಪಡೆದರು. ಅಲ್ಲಿದ್ದ ಜ್ಞಾನಿಗಳಾದ ಭಾಗಣ್ಣ ದಾಸರು ವೃದ್ಧರೂ ಪಂಡಿ

ತರಾದ ಶ್ರೀ ವೆಂಕಟ ನೃಸಿಂಹಾಚಾರ್ಯರಿಗೆರಗಿ ಮರ್ಯಾದೆ ಪುರಸ್ಕರವಾಗಿ ಕುಳ್ಳಿರಿಸಿ ಕುಶಲ ಪ್ರಶ್ನೆಯೊಡನೆ ಆಚಾರ್ಯರ ಆಗಮನ ವಿಚಾರಗೈದೊಡನೆ ಆಚಾರ್ಯರಿಗೆ ಮನಸ್ಸಿನಲ್ಲಿದ್ದ ಮಾತು ಹೇಗೆ ಹೇಳಲೆಂಬ ನಾಚಿಕೆಯಿಂದ ಏನೋ ತುಳಸಿ ತೆಗೆಯುವದಕ್ಕಾಗಿ ಬಂದಿದ್ದೆ. ಶ್ರೀ ವೆಂಕಟೇಶನ ದರ್ಶನವಾದೀ ತೆಂದು ನಾಚಿಕೆಯಿಂದ ಹೇಳಿದರು. ಆದರೆ ವೆಂಕಟನ ಭಕ್ತರೂ ಜ್ಞಾನಿಗಳಾದ ಭಾಗಣ್ಣದಾಸರು ಅವರಿಂಗತವನ್ನರಿಯರೇ ? ಆಗ್ಗೆ ಭಾಗಣ್ಣ ದಾಸರು ವಿನಯ ದಿಂದ ನಮಿಸಿ.

" ಭರದಿ ವೆಂಕಟ ನೃಸಿಂಹಾರ್ಯರು ಬರಲು ಚರಣಕೆ ನಮಿಸುತಾ ||
ಅರಸಿ ಆಜ್ಞವೆ ಮುಖ್ಯ ನಿಮಗೆಂದು | ಸರಸ ವಚನಗಳಾಡುತಾ ||೬೧||

( ಎಂದು ತಂದೆ ಗೋಪಾಲ ವಿಠಲ ವಚನ ) ಆಚಾರ್ಯರೆ ಮುಖ್ಯ ವಾಗಿ ತಮ್ಮ ಪತ್ನಿಯ ಆಜ್ಞೆಯಮೇರೆಗೆ ಆಗಮಿಸಿರುವಿರಿ ಒಳ್ಳೇದಾಯಿತು. ತಮಗೆ ಚಿಂತೆ ಯಾತಕ್ಕೆ ಸರ್ವಥಾ ಚಿಂತೆ ಮಾಡಬೇಡಿರೆಂದು ವಿಜ್ಞಾಪಿಸಿ ಇಕೋ ನೋಡಿರಿ ನಮ್ಮ ರಕ್ತ-ಶರಗಿನಲ್ಲಿ ಕಟ್ಟಿಕೊಟ್ಟ ೨ ಖರ್ಜೂರ ಫಲವನ್ನು ತನ್ನಿರೆಂದು ತಾವೇ ಆಚಾರ್ಯರ ಉಪರಣಿಯಲ್ಲಿ ಕಟ್ಟಿದ ಉತ್ತತ್ತಿಗಳನ್ನು ಬಿಚ್ಚಿ ತೆಗೆದುಕೊಂಡು ಶ್ರೀ ವೆಂಕಟನಿಗೆ ಸಮರ್ಪಿಸಿ ಮಂಗಳಾರ್ತಿಗೈದು ಫಲ ಮಂತ್ರಾ ಕ್ಷತೆಗಳು ಇವು ವೆಂಕಟೇಶನ ಪ್ರಸಾದವು. ಆತನ ಅನುಗ್ರಹದಿಂದಲೇ ಸಕಲವೂ ಸಿದ್ಧಿಸುವದು ಚಿಂತೆ ಮಾಡಬೇಡಿರಿ. ಮುಂದೆ ನಿಮ್ಮ ಮಕ್ಕಳು ಮಹಾ ಪಂಡಿತರಾಗಿ ಜ್ಞಾನನಿಧಿಗಳು ಲೋಕೋದ್ಧಾರರಾಗು ವರು. ಎಂದು ಹೇಳಲು ಆಚಾರ್ಯರು ಈಗ ಮಗನಿಗೆ ಬಹು ವಯಸ್ಸಾಗಿದೆ ವಿದ್ಯಾಹೇಗೆ ? ಲಭಿಸ ಬೇಕೆಂದು ಕೇಳಲು ತಾವು ಮಗನನ್ನು ಮುಂದಿರಿಸಿಕೊಂಡು ಸಕಲ ಶಾಸ್ತ್ರ ಗ್ರಂಥಗಳನ್ನು ಪಾರಾಯಣ ಮಾಡಿರಿ. ಅದರಿಂದ ಸಕಲ ವಿದ್ಯಾಹರಿಯು ನಿಮ್ಮ ಮಕ್ಕಳಿಗೆ ಲಭಿಸುವನು ಸಂದೇಹ ಬೇಡರಿ. " ಈ ಗುಮ್ಮಿಯೊಳಗಿನ ಕಾಳುತೆಗೆದು ಎರಡನೇ ಗುಮ್ಮಿಗೆ ಕಾಳು ಹಾಕುವದು ಏನು ಅಸಾಧ್ಯವೆಂದು ಹೇಳಿದರಂತೆ ಕಾಳು ತಂಬಲಿಕ್ಕೆ ಗುಮ್ಮಿಗಳು ಹೇಗೆ ಉಚಿತವೊ ಹಾಗೆಯೇ ಜ್ಞಾನಿಗಳಾದವರೇ ಸುಜ್ಞಾನಾಖ್ಯ ಕಾಳು ತುಂಬಲು ಯೋಗ್ಯರು ಜ್ಞಾನಿಗಳೇ ಬಹುತ್ವರೆಯಿಂದ ಗ್ರಹಿಸುವರೆಂಬ ಭಾವ "

ಹೀಗೆ ಶ್ರೀ ವೆಂಕಟ ನೃಸಿಂಹಾಚಾರ್ಯರು ಶ್ರೀ ಭಾಗಣ್ಣ ದಾಸರ ಆಜ್ಞೆಪಡೆದು ಐಜಿಗೆ ಮರಳಿ ಬಂದರು. ಪತ್ನಿಗೆ ಸಕಲ ವೃತ್ತಾಂತ ಹೇಳಿದರು. ಪತಿ-ಪತ್ನಿಯರು ಹರ್ಷಿತರಾಗಿ ಬ್ರಾಹ್ಮಣ ಭೋಜನ ಮಾಡಿಸಿ ಮಗನಾದ ಐಜಿ ವೆಂಕಟ ರಾಮಾಚಾರ್ಯರಿಗೆ ತಿಳಿಹೇಳಿ ಸುಮುಹೂರ್ತದಲ್ಲಿ ಗ್ರಂಥಗಳನ್ನು ಶ್ರವಣಮಾಡಿಸ ತೊಡಗಿದರು. ಶ್ರೀ ವೆಂಕಟ ರಾಮಾಚಾರ್ಯರಿಗೆ ಹಿಂದಿನ ಜನ್ಮದಸ್ಫೂರ್ತಿ ಬಂದೊದಗಿತು. ಕೇವಲ ಒಂದು ಸಲ ಕೇಳಿದ ಮಾತ್ರದಿಂದ ೧ ವರ್ಷದೊಳಗಾಗಿಯೇ ಸಕಲಶಾಸ್ತ್ರ ಪಾಂಡಿತ್ಯವೂ ಬಂದೊದಗಿತು ವೇದ ವೇದಾಂತ ಶಾಸ್ತ್ರಗಳಲ್ಲಿ ಪಾರಂಗತರಾದರು. ಕೆಲದಿನಗಳಲ್ಲಿಯೇ ವೃದ್ಧ ತಂದೆಗಳಾದ ಶ್ರೀ ವೆಂಕಟ ನೃಶಿಂಹಾಚಾರ್ಯರು ಪರಲೋಕಯಾತ್ರೆ ಗೈದರು. ಮುಂದೆ ಎಲ್ಲ ಕಾರ್ಯ ತೀರಿಸಿದನಂತರ ಪೂರ್ವಜರ ಸಂಪ್ರದಾಯದಂತೆ ಅಗ್ನಿ ಹೋತ್ರವನ್ನು ಧರ್ಮ ಪತ್ನಿಯೊಡನೆ ಸಾಗಿಸಿದರು. ಅನೇಕ ಶಿಷ್ಯರು ಓದಲು ಆಗಮಿಸಿದರು. ಪಾಠ ಪ್ರವಚನ ನಡೆಯಿತು. ಜಗತ್ ಪ್ರಸಿದ್ಧರಾದರು.

## ಬೀಚಪಲ್ಲಿಗೆ ಪ್ರಯಾಣ

ಇಂಥ ದೊಡ್ಡ ಪಂಡಿತರಾದರೂ ಲೌಕಿಕಕ್ಕೆ ಮನಸೋಲಲಿಲ್ಲ. ಸತತ ಭಗವದಾರಧನೆಯಲ್ಲಿರತರಾಗಿರುವ ಭಕ್ತರಿಗೆ ಭಗವಂತನು ಮರೆಯುವನೆ ? ಸಂಸಾರಕ್ಕೆ ತಕ್ಕ ಸಾಧನೆಗಳು ಬಂದೊದಗಹತ್ತಿದವು. ಗದ್ವಾಲ ರಾಜರಿಂದ ವಿಶೇಷ ಮರ್ಯಾದೆಯಾದರೂ ಅಂತರಂಗದಿಪ್ಪ ಪ್ರಾಣನಾಥನು ಕೈಪಿಡಿದು ನೀವು ಬೀಚಪಲ್ಲಿಗೆ ಬಂದು ಎನ್ನ ಸೇವೆ ಮಾಡಿರೆಂದು ಆಜ್ಞೆ ಇತ್ತನು. ಮನೋಭಿಮಾನಿಗಳಾದ ಮಹರುದ್ರರು ಸ್ಥಿರ ಮನಸ್ಕರನ್ನಾಗಿ ಮಾಡಿ ಬೀಚ ಪಲ್ಲಿ ಗದ್ವಾಲ ಇಲಾಖೆಕ್ಕೆ ಸಕುಟುಂಬ ಶಿಷ್ಯರು ಸಹಿತವಾಗಿ ಶ್ರೀ ಪ್ರಾಣದೇವರ ಸೇವಾರ್ಥವಾಗಿ ಬಿಜಯಂಗೈದರು.

ಮಹಾತ್ಮರು ಜ್ಞಾನಿಗಳ ಆಗಮನವಾಯಿತೆಂದು ಬೀಚಪಲ್ಲಿಯ ಭಕ್ತ ಜನರು ಗೌಡ ಶಾನಭೋಗರು ಶ್ರೀ ವೆಂಕಟರಾಮಾರ್ಯರನ್ನು ವಿಜ್ರಂಭಣೆಯಿಂದ ಬರಮಾಡಿಕೊಂಡು ಇಳಿಯಲು ಒಳ್ಳೇ ಬಿಡಾರ ತಕ್ಕ ಸಾಮಗ್ರಿಗಳನ್ನು ಒದಗಿಸಿಕೊಟ್ಟು ಆಚಾರ್ಯರ ಅನುಗ್ರಹಕ್ಕೆ ಪಾತ್ರರಾದರು.

ಶ್ರೀ ಆಚಾರ್ಯರು ನಿತ್ಯ ಪ್ರಾತಃಸ್ನಾನಾನ್ಹಿಕ ಪಾಠಪ್ರವಚನ ಶ್ರೀ ಪ್ರಾಣದೇವರ ಸೇವಾ ತಪಸ್ಸು ಗೈಯಲು ಪ್ರಾರಂಭಿಸಿದರು. ಅಗ್ನಿಹೋತ್ರಾದಿಗಳು ಇದ್ದೇ ಇದ್ದವು. ಮಧ್ಯಾನ್ಹ ದೇವತಾರ್ಚನೆ ನೂರಾರು ಜನ ಬ್ರಾಹ್ಮಣ ಭೋಜನ, ಪುನಃ ಪಾಠ ಸಾಯಂಕಾಲ ನಿತ್ಯಾನುಷ್ಠಾನ ಭಜನೆ ಪುರಾಣಾದಿಗಳು ನಡೆದವು. ಈ ಪ್ರಕಾರ ಶ್ರೀ ವ್ಯಾಸರಾಜ ಪ್ರತಿಷ್ಠಿತ ಶ್ರೀ ಪ್ರಾಣದೇವರ ಸೇವಾ ಸತತವಾಗಿ ೧೨ ವರ್ಷ ಮಾಡಿದ್ದು ಪ್ರಾಣಪ್ರಸಾದವಾಯಿತು. ಪ್ರಾಣದ್ವಾರಾ ಶ್ರೀಹರಿ ಸಂತುಷ್ಟನಾದ ಸಾಮಾನ್ಯಪರೋಕ್ಷ ದೇವತೆಗಳಾದ ಕಾರಣ ಬಿಂಬಾ ಪರೋಕ್ಷವು ವಿಶೇಷವಾಗಿ ವ್ಯಕ್ತವಾಯಿತು. ಶ್ರೀಹರಿ ಪ್ರಾಣಪ್ರಸಾದದಿಂದ, " ವಾಸುದೇವ ವಿಠಲವೆಂಬ ಅಂಕಿತವು ದೊರೆಯಿತು. ಈ ಅಂಕಿತದಿಂದಲೇ ಅನೇಕ ಪದ ಸುಳಾದಿಗಳನ್ನು ಮಾಡಿದರು ಮತ್ತು ಭಗವದುಪಾಸನೆಗೆ ಮಾರ್ಗವಾದ ಮಾನಸಸ್ಮೃತಿಯನ್ನು ಸಂಸ್ಕೃತದಲ್ಲಿ ರಚಿಸಿದರು. ಇದು ಅನೇಕ ವೇದೋಪನಿಷತುಗಳ ಸಾರವಾಗಿದೆ. ಉಪಾಸಕರಿಗೆ (ಗುರು ಪ್ರಸಾದದಿಂದ) ಯೋಗ್ಯವಾದದ್ದು. (ಇದನ್ನು ಆದವಾನಿ ಚೊಕ್ಕಾನಹಳ್ಳಿ ಕೃಷ್ಣರಾಯರು ಅಚ್ಚು ಮಾಡಿಸಿದ್ದಾರೆ.)

ಕೆಲಕಾಲ ನಂತರ ಶಿಷ್ಯ ಪ್ರಾರ್ಥನೆಯಂತೆ ಸಕಲ ಉಪನಿಷತ್ ಆಧಾರದ ಮೇಲೆ ಕನ್ನಡದಲ್ಲಿ ತಾವೇ ಬಾಲಬೋಧ ಲಿಪಿಯಲ್ಲಿ ಬರೆದಿದ್ದಾರೆ. ( ಇದು ನಮ್ಮ ಮಂಡಲದಿಂದ ಹೊರಟ ಉಪಾಸನಾ ಭಾಗ ಸುಳಾದಿಯಲ್ಲಿ ಇದೆ ) ೧೨ ವರ್ಷ ಬೀಚಪಲ್ಲಿಯಲ್ಲಿದ್ದರು. ಹೀಗೆ ಪ್ರಾಣಪ್ರಸಾದಾಂಕಿತ ಲಭಿಸಿದ ನಂತರ ನೀವು ಪುಣ್ಯಕ್ಷೇತ್ರವಾದ ವೇಣಿಸೋಮಪುರಕ್ಕೆ ಹೋಗಿ ತುಂಗಾ ತೀರದಲ್ಲಿ ತಪಸ್ಸು ಗೈದು ಸಾಧನ ಮಾಡಿರೆಂದು ಆಜ್ಞೆಯಾಯಿತು.

## ವೇಣಿ ಸೋಮಪುರಕ್ಕೆ ದಿಗ್ವಿಜಯ.

ಶ್ರೀ ಆಚಾರ್ಯರು ವೇಣಿ ಸೋಮಪುರಕ್ಕೆ ಪ್ರಯಾಣ ಬೆಳಸಿದರು. ಈ ವೇಣಿ ಸೋಮಪುರ ಗದ್ವಾಲ ಇಲಾಖೆಯಲ್ಲಿದು, ಆಚಾರ್ಯರ ಐಜಿ ಗ್ರಾಮಕ್ಕೆ ದಕ್ಷಿಣಭಾಗ ೯ ಮೈಲು ಮೇಲಿದೆ. ತುಂಗಾ ತೀರ, ರಮಣೀಯವಾಗಿ ಕಂಗೊಳಿಪ ಕ್ಷೇತ್ರ, ಚವನ ಋಷಿಗಳಾಶ್ರಮ ತಪಸ್ಸಿಗೆ ಯೋಗ್ಯವಾ

ದದ್ದು. ಏಕಾಂತ ಸ್ಥಳ. ಇಂಥ ಪುಣ್ಯ ಕ್ಷೇತ್ರಕ್ಕೆ ಪುಣ್ಯಾತ್ಮರಾದ ಮಹಾತ್ಮರ ಆಗಮನದಿಂದ ಪುಣ್ಯತಮವಾದ ಸುಕ್ಷೇತ್ರವೆನಿಸಿತು.

ಈ ವೇಣಿ ಸೋಮಪುರ ತುಂಗಾ ನದಿ ದಡದಲ್ಲಿ ಹೈದರಾಬಾದ ಕರ್ನೂಲ ನವಾಬನ ಆಧೀನವಾಗಿ, ಗದ್ವಾಲ ಸಂಸ್ಥಾನಾಧೀಶರ ಸ್ವಾಧೀನದಲ್ಲಿ ಇರುವದಾಗಿತ್ತು. ಇದು ತುಂಗಾ ದಡವಾದ ಕಾರಣ ನವಾಬನ ಸೈನಿಗೆ ಗ್ರಾಸಾನುಕೂಲವಾದ ಕಾಳುಕಡಿತುಂಬುವ ಬೊಕ್ಕಸ (ಗೋದಾಮು) ಆಗಿತ್ತು. ದೇವರು ಸತ್ಯಸಂಕಲ್ಪನು ತನ್ನ ಭಕ್ತರನ್ನು ಕೈಬಿಡನು ಶ್ರೀ ಐಜಿ ವೆಂಕಟರಾಮಾರ್ಯರು ವೇಣಿಸೋಮಪುರಕ್ಕೆ ದಿಗ್ವಿಜಯ ಗೈದ ವಾರ್ತೆ ರಾಜನು ಕೇಳಿದನು. ಶ್ರೀ ಆಚಾರ್ಯರಿಗೆ ವಸತಿಗೆ ಅನಾನುಕೂಲವೆಂದು ತಿಳಿಯಿತು ಭಕ್ತನಾದ ಸೋಮಭೂಪಾಲ ಗದ್ವಾಲರಾಜನು ಮೇಲಿನ ಅಪ್ಪಣೆಯನ್ನು ಪಡೆದು ತಾನು ಸ್ವತಃ ಬಂದು ಆ ಕಿಲ್ಲೆಯಲ್ಲಿದ್ದ ಕೆಲ ಸಾಮಗ್ರಿಗಳನ್ನು ತೆಗೆಸಿ ಶ್ರೀ ಆಚಾರ್ಯರ ವಾಸಸ್ಥಾನಕ್ಕೆ ಆ ಕಿಲ್ಲೆಯನ್ನೇ ಸಮರ್ಪಿಸಿದನು. ಭಗವದನುಗ್ರಹವೆಂಬ ದುರ್ಗವು ಕೈವಶವಾಗಿರಲಿಕ್ಕೆ ಬಾಹಿರ ದುರ್ಗವಾದ ದುರ್ಗವು ಕೈವಶವಾದುದೇನಚ್ಚರ? ರಾಜನು ಅನೇಕ ರೀತಿಯಿಂದ ಸೌಲಭ್ಯ ಒದಗಿಸಿದನು. ಅವನಿಗೆ ಪೂರ್ಣಾನುಗ್ರಹವು ಆಯಿತು ಅಂದಿನಿಂದ ಐಜಿ ಆಚಾರ್ಯರ ವಾಸಸ್ಥಾನವಾಯಿತು.

ಈ ಕಾಲ ಸುಮಾರು ಶಾ. ಶಕೆ ೧೬೬೮ ವರುಷ ಆಗ್ಗೆ ಶ್ರೀ ಗೋಪಾಲದಾಸರಾಯರಿಗೆ ೨೪ ವಯ. ಶ್ರೀ ವಿಜಯದಾಸರ ಸನ್ನಿಧಿ ಯಾವಾಗಲೂ ಹೋಗಿಬರುತ್ತಲಿದ್ದರು. ಐಜಿ ಆಚಾರ್ಯರು ಐಜಿ ಬಿಟ್ಟನಂತರ ಶ್ರೀ ಗೋಪಾಲದಾಸರ ಕುಟುಂಬದವರೆಲ್ಲರಿಗೆ ಐಜಿ ಆಚಾರ್ಯರು ಸ್ವಲ್ಪ ದೂರದಲ್ಲಾದರು. ಪೂರ್ವದಿಂದ ಶ್ರೀ ಗೋಪಾಲದಾಸರ ಎರಡನೇ ತಮ್ಮಂದಿರಾದ ಶ್ರೀ ವರದ ಗೋಪಾಲದಾಸರಲ್ಲಿ ಆಚಾರ್ಯರಿಗೆ ತುಂಬಾ ಪ್ರೇಮ. ಕಾರಣ ಗೋಪಾಲದಾಸರ ಮೂರು ಜನ ತಮ್ಮಂದಿರು ಮತ್ತು ಎಲ್ಲ ಕುಟುಂಬದವರನ್ನು ಉತ್ತನೂರಿಂದ ವೇಣಿ ಸೋಮಪುರಕ್ಕೆ ಬರಮಾಡಿಕೊಂಡರು.

ವೇಣಿ ಸೋಮಪುರ ಹೆಸರು ಬರಲಿಕ್ಕೆ ಕಾರಣವೇನಂದರೆ ಆ ಊರ ಸುತ್ತಲೂ ಉತ್ತರ ಭಾಗಕ್ಕೆ ಕರಿಕಲ್ಲುಗಳು ವೇಣಿ ( ಹೆರಳು ) ಯಂತೆ ಸುತ್ತಿರು

ವವು. ಕಾರಣ ವೇಣಿ ಸೋಮಪುರವೆಂದು ಕರೆಯುವರೆಂದು ಪೂರ್ವಜರ ಹೇಳಿಕೆ. ಮತ್ತು ಪೂರ್ವದಲ್ಲೇ ತುಂಗಾ ತೀರದಲ್ಲಿ ಅನೇಕ ಋಷಿಗಳು ತಪಸ್ಸು ಮಾಡು ತ್ತಿದ್ದರಂತೆ; ಆಗ್ಗೆ ಚವನಕರ ಡೋಣಿ ಎಂಬ ಗ್ರಾಮ. ಗಂಡಿ ಆಚಾರ್ಯರೇ ಚವನಕ ಋಷಿಗಳಂತೆ. ಇವರ ವಸತಿ ಚವನಕ ಡೋಣಿಯಾಗಿತ್ತಂತೆ. ಇವರು ಪ್ರತಿನಿತ್ಯ ತುಂಗಾಸ್ನಾನಕ್ಕೆ ಭೂಮಿಯೊಳಗಿರುವ ಅಂತರ ಮಾರ್ಗದಿಂದ ವೇಣಿ ಸೋಮಪುರಕ್ಕೆ ಬಂದು ತುಂಗಾ ಸ್ನಾನ ಮಾಡಿ ತಪಸ್ಸು ಗೈದು ಹೋಗುವರು. ಕಾರಣ ಈ ವೇಣಿ ಸೋಮಪುರವು ಪೂರ್ವದಿಂದಲೂ ಪುಣ್ಯ ಕ್ಷೇತ್ರ, ಆ ಚವನಕರ ಡೋಣಿಗೆ ಈಗ ಚಾಗಡೋಣಿ ಎಂತ ನಾಮವಿದೆ.

ಹರಿದಾಸರಿದ್ದಡ್ಡೇ ಕುರುಕ್ಷೇತ್ರ, ಈಗಲಂತೂ ಅಪರೋಕ್ಷ ಜ್ಞಾನಿಗಳ ವಸತಿಯಾಯಿತು. ಮುಂಪೆ ಐಜಿ ವೆಂಕಟರಾಮಾಚಾರ್ಯರು ಅಗ್ನಿಹೋತ್ರಾ ದಿಗಳನ್ನಿಟ್ಟು ಸಾಧನ ಮಾಡತೊಡಗಿದರು. ಇವರಲ್ಲಿ ಶಾಸ್ತ್ರಾಭ್ಯಾಸಕ್ಕೆ ಒಳ್ಳೆ ೩೦೦ ಜನ ಶಿಷ್ಯ ಸಂಪತ್ತು ಕಲೆಯಿತು. ಪಾಠ ಪ್ರವಚನ ನಡೆಯಿತು. ಸುಧಾ ಪ್ರಾರಂಭವಾಯಿತು. ಪ್ರತಿನಿತ್ಯ ೩ ತಾಸಿನಂತೆ ಸುಧಾ ಪಾಠ ಹೇಳಿ ಮೂರು ವರ್ಷಕ್ಕೊಮ್ಮೆ ಮಂಗಳ. ಇದರಂತೆ ೧೨ ಸಲ ಸುಧಾ ಮಂಗಳ (೩೬) ವರ್ಷ ವರೆಗೆ ಮಾಡಿದ್ದಾರೆ.

ಈ ಅವಧಿಯಲ್ಲಿ ಕೆಲ ಶಿಷ್ಯ ಸಮೇತರಾಗಿ ವರ್ಷದಲ್ಲಿ ಆರು ತಿಂಗಳು ಸಂಚಾರ ಆರು ತಿಂಗಳು ವಸತಿ. ಸಂಚಾರದಲ್ಲಿ ಬಂದ ದ್ರವ್ಯವೆಲ್ಲ ಶ್ರೀ ವೆಂಕಟೇ ಶನಿಗೆ ಮುಡುಪು. ಊರಲ್ಲಿದ್ದಾಗ್ಗೆ ದ್ರವ್ಯ ಕಮ್ಮೀಬೀಳಲು ಕೋಟಿಖಾನಿ ಸುಬ್ಬಯ್ಯಗೆ ಮುಡುಪಿನಲ್ಲಿಯ ರೂ. ತೆಗೆದು ಕೊಳ್ಳಲು ಆಜ್ಞೆ. ಪುನಃ ಆಹಣ ಶ್ರೀ ವೆಂಕಟನಿಗೆ ಭರ್ತಿಮಾಡುವರು. ಇವರು ಪುಣ್ಯಲೋಭಿಗಳಂತೆ. ಪ್ರತಿನಿತ್ಯ ಅನ್ನದಾನ ನಡದದೆ. ಹುಳಿಗೆ ನಿತ್ಯ ೨ ಸೊಲಿಗೆ ೮ ಶೇರುಬ್ಯಾಳಿ ಹಾಕುವರಂತೆ ಇಷ್ಟುಜನ ಶಿಷ್ಯರಿಂದ ಪ್ರತಿ ಶಿಷ್ಯರಿಗೆ ಪಾದಕ್ರಮನಡದಿದೆ. ಈ ಕಾಲದಲ್ಲಿ ಅನೇಕ ಮಹಿಮೆ ತೋರಿದ್ದಾರೆ.

## ನೀರಿನವರಿಂದ ಶಾಸ್ತ್ರಾರ್ಥ ಹೇಳಿಸಿದ್ದು

ಒಂದುಸಲ ವೇಣೀ ಸೋಮಪುರದಲ್ಲಿ ಪಾಠನಡೆದಾಗ ಗದ್ವಾಲ ಮಹಾ ರಾಜನಿಂದ ಸಭಾಕ್ಕೆ ಬರಲು ಆಹ್ವಾನಪತ್ರ ಬಂದಿತು. ಪಾಠ ಪ್ರವಚನ ನಿಲ್ಲು

ವಂತಿಲ್ಲ. ಪತ್ರ ತಂದವರ ಅತ್ಯಾತುರದ ಬಿನ್ನೈಸುವಿಕೆ ಹೀಗಾಗಲು ತಮ್ಮಲ್ಲಿ ರುವ ನೀರು ತರುವನನ್ನು ಕರೆದು ಶ್ರೀ ಹರಿಯನ್ನು ಪ್ರಾರ್ಥಿಸಿ ಆತನಿಗೆ ಫಲ ಮಂತ್ರಾಕ್ಷತೆಕೊಟ್ಟು ಗದ್ವಾಲ ಸಭೆಗೆ ಹೋಗಿಬಾ ಎಂದು ಆಶೀರ್ವದಿಸಿ ಕಳು ಹಲು, ಆ ನೀರಿನ ಬ್ರಾಹ್ಮಣ ಮುಗ್ಧನಾದವನು ಗದ್ವಾಲ ಸಭಾಕ್ಕೆಪೋಗಿ ಅನೇಕ ಪಂಡಿತರುಗಳೊಡನೆ ಶಾಸ್ತ್ರ ವಿಚಾರಮಾಡಿ ಉತ್ತಮ ಸಂಭಾವನೆ ಯನ್ನು ಪಡೆದ. ರಾಜನಿಗೆ ಐಜಿ ಆಚಾರ್ಯರ ಶಿಷ್ಯನೇ ಇಂಥ ಪಂಡಿತೋತ್ತಮ ನಿದ್ದಾನೆಂಬ ಮಹಾಭೂಷಣ. ಇತ್ತ ಪಂಡಿತರಿಗೆಲ್ಲ ಮಹದಾಶ್ಚರ್ಯ ಗದ್ವಾಲ ಸಭೆಯಿಂದ ನೀರಿನವನು ಬಂದು ಶ್ರೀ ಆಚಾರ್ಯರ ಪಾದಸನ್ನಿಧಿ ಎಲ್ಲ ಮರ್ಯಾದೆ ಕಾಣಿಕೆಗಳನ್ನರ್ಪಿಸಿ ಪುನೀತನಾದ. ಸಾಸ್ತ್ರ ಪಾಂಡಿತ್ಯವು ಲಭಿಸಿತು.. ಇದು ಶ್ರೀ ಆಚಾರ್ಯರ ಮಂತ್ರಾಕ್ಷತೆ ಮಹಾಮಹಿಮೆ.

೨ ಇನ್ನೊಂದು ಇತಿಹಾಸವೇನಂದರೆ ಈ ನಡುವೆ ಇವರಿಗೆ ಪತ್ನಿ ವಿಯೋಗವಾಯಿತೆಂದು ಹೇಳುತ್ತಾರೆ. ಅಗ್ನಿ ಹೋತ್ರ ನಿಲ್ಲಬಾರದೆಂದು ಪುನಃ ೨ ಲಗ್ನ ಮಾಡಿಕೊಂಡರೆಂದು ವಂಶಜರ ಪರಂಪರಾಗತ ವಾರ್ತೆ (ನಿಜವೂ) ಅದೆ.

೩ ಈ ನಡುವೆ ಈ ಐಜಿ ವೆಂಕಟ ರಾಮಾಚಾರ್ಯರಲ್ಲೆ ಶಾಸ್ತ್ರಾಭ್ಯಾಸ ಮಾಡಲು ಸವನೂರ ಇಲಾಖೆ ಸಿದ್ಧಾಪುರದಲ್ಲಿ ಉದಿಸಿದ ಆಡಿವಿ ಆಚಾರ್ಯರು ಇವರ ಸನ್ನಿಧಿಗೆ ಬಂದಿದ್ದಾರೆ. ಶ್ರೀಶನ ಆಜ್ಞೆಯಂತೆ ಶಾಸ್ತ್ರಾಭ್ಯಾಸವೂ ನಡ ದದೆ. ಇತ್ತ ಶ್ರೀಗುರುಗೋಪಾಲದಾಸರು ( ಶೀನಪ್ಪದಾಸರು ) ಶ್ರೀವರದ ಗೋಪಾಲ ದಾಸಪ್ಪದಾಸರು ಶ್ರೀ ತಂದೆ ಗೋಪಾಲ ರಂಗಪ್ಪ ದಾಸರಿದ್ದಾರೆ) ಅದರಲ್ಲಿ ಅಡವಿ ಆಚಾರ್ಯರು ದಾಸಪ್ಪ ದಾಸರಲ್ಲೆ ಬಹುಪ್ರೇಮ ಭಗವಂತನ ಮಹಿಮೆ ಏಕಾಂತವಾಗಿ ಹೇಳುವರು. ಈ ಎಲ್ಲರ ಅಂತರಂಗ ಒಂದೆಗುಟ್ಟು ಮಹಾ ಪ್ರೀತಿಯಿಂದ ವಾಸಮಾಡಿದ್ದಾರೆ.

## ಶ್ರೀ ಕೃಷ್ಣ ಪ್ರತಿಷ್ಠೆ

೪. ಆಚಾರ್ಯರಿಗೆ ಸುಮಾರು ೫೫-೬೦ ವರ್ಷ ವಯಸ್ಸಾಗಿದೆ ಪುತ್ರ ಸಂತಾನಭಿವೃದ್ಧಿಯಿಲ್ಲ. ಲೋಕರೀತ್ಯಾ ಇದೊಂದು ಚಿಂತೆ ತೋರಿದರು. ಸೂಕ್ಷ್ಮ ಜ್ಞಾನಿಗಳೂ, ಪ್ರಿಯರೂ ಆದ ದಾಸಪ್ಪ ದಾಸರನ್ನು ಕೇಳಲು

ಶ್ರೀ ಸಂತಾನ ಗೋಪಾಲ ಕೃಷ್ಣನ ಪ್ರತಿಷ್ಠಾಪನೆ ಮಾಡಿದರೆ ಸಂತಾನ ವಾಗುವದೆಂದು ಹೇಳಿದರು

ಆಗ್ಗೆ ಶ್ರೀ ಆಚಾರ್ಯರ ಸಂಚಾರವಿದೆ. ವಲ್ಲೂರ ಗ್ರಾಮದಲ್ಲಿ ಪಾಠ ಪ್ರವಚನ ಪೂಜಾದಿಗಳು ನಡೆದಿವೆ. ರಾತ್ರಿ ಆಚಾರ್ಯರಿಗೆ ಸ್ವಪ್ನದಲ್ಲಿ ಶ್ರೀ ಗೋಪಾಲ ಕೃಷ್ಣನು ಸಂದರ್ಶನ ಕೊಟ್ಟಾನೆ ನಾನು ಇಲ್ಲೆ ಇರುವೆ. ನನ್ನ ಕರದೊಯ್ದು ನಿನ್ನ ಗ್ರಾಮದಲ್ಲೆ ಪ್ರತಿಷ್ಠಾಪನೆ ಮಾಡೆಂದು ಆಜ್ಞೆ ಯಾಯಿತು. ಎಚ್ಚತ್ತು ದಾಸಪ್ಪನವರಿಗೆ ಹೇಳೋಣವೆ ಆನಂದವಾಯಿತು. ಅಲ್ಲಿಯ ಗೌಡ ಶಾನಭೋಗರ ವೃದ್ಧ ಪರಂಪರೆಯಿಂದ ಬಂದ ಸಂಗತಿ ಗೊತ್ತಾಯಿತು. ಊರ ಜನರ ಸಹಾಯದಿಂದ ಆ ವಲ್ಲೂರ ಕೆರೆಯತೂವು ಒಂದು ಕಡೆ ಅಗಳಿಸಿದರು. ಒಂದು ಸುಂದರವಾದ ಗೋಪಾಲಕೃಷ್ಣನ ಶಿಲಾಮಯ ಪ್ರತಿಮೆ ದೊರಕಿತು. ಬಹು ಸಂತೋಷಯುಕ್ತರಾದರು. ಆದರೆ ಸ್ವಪ್ನದಲ್ಲಿ ತೋರಿದ ಪ್ರತಿಮೆಯಂತಿರಲಿಲ್ಲ ಚಿಂತೆಯೊಳಗಾದರೂ ಆ ಊರ ಭಕ್ತರ ಪ್ರಾರ್ಥನೆಯಂತೆ ಆ ವಲ್ಲೂರಲ್ಲಿಯೇ ವಿಧಿ ಪೂರ್ವಕ ಪ್ರತಿಷ್ಠಾಪನೆ ಮಾಡಿದ್ದಾರೆ. ಈಗಲೂ ಪೂಜಾದಿಗಳು ನಡೆದವೆ. ಪುನಃ ಸ್ವಪ್ನವಾಗಿದೆ. ಮತ್ತು ಕೆರೆಯತೂವು ಅಗಳಿಸಲು ಇನ್ನೊಂದು ಶ್ರೀಗೋಪಾಲಕೃಷ್ಣ ಸುಂದರ ಶಿಲಾ ಪ್ರತಿಮೆ (ಸ್ವಪ್ನ ಸಂದರುಷನವಾದುದೆ) ಶಿಕ್ಕಿದೆ. ಶಿಲ್ಪ ಶಾಸ್ತ್ರವಿರೋಧ ಬಲಪಾದದ ಮೇಲೆ ಎಡಪಾದ ಸುಮಾರು ೧|| ಅಡಿ ಎತ್ತರವಿದೆ. ಇದನ್ನು ತಂದು ಸುಮುಹೂರ್ತದಲ್ಲೆ ತಂತ್ರಸಾರೋಕ್ತವಾಗಿ ವೇಣಿಸೋಪುರದಲ್ಲಿ ದೇವಾಲಯವನ್ನು ನಿರ್ಮಿಸಿ ಪ್ರತಿಷ್ಠಾಪನೆ ಮಾಡಿದರು. ಸಕಲ ಪೂಜಾದಿ ಗಳು ಜರಗಹತ್ತಿವೆ. ೨-೩ ವರ್ಷವಾಯಿತು ಪುತ್ರಸಂತಾನವೇ ಇಲ್ಲ. ಆಗ್ಗೆ ಆಚಾರ್ಯರು "ತಿಳುಪಿದೆನು ಪರಮುದಯದಿಂದ ಮುಂದಣಕಾರ್ಯ" ವೆಂಬೋ (೬೦) ನೇ ಪದದಲ್ಲಿ "ತನಯರೂ ಜನಸಲಿಲ್ಲ. ಜನನಿಜನಕ ತನಯಎನಗೆ ನೀನೆ" ಎಂದು ಪ್ರಾರ್ಥಿಸಿದ್ದಾರೆ.

ಇತ್ತ ಆಚಾರ್ಯರ ಮೊದಲಿನ ಕುಟುಂಬದವರಲ್ಲಿ ಕು. ಲಕ್ಷ್ಮಕ್ಕನೆಂಬುವ ಕನ್ಯಾಮಣಿಯು ಜನಿಸಿದ್ದಳು. ಅವರಿಗೆ ಲಗ್ನವೂ ಆಗಿತ್ತು. ಆಚಾರ್ಯರ ಈ ಮಕ್ಕಳ ಹೊಟ್ಟೆಯಲ್ಲೇ ಇಬ್ಬರು ಗಂಡು ಮಕ್ಕಳಿದ್ದರು. ಗೋಪಾಲ

ಕೃಷ್ಣಾಚಾರ್ಯರು ರಾಮಾಚಾರ್ಯರು ಇವರು ಶ್ರೀ ಆಚಾರ್ಯರಿಗೆ ದೌಹಿತ್ರರು. ಹಿರಿಯ ಮಕ್ಕಳಹೆಸರು ಗೋಪಾಲಕೃಷ್ಣ ಇವರು ಶ್ರೀ ಗೋಪಾಲದಾಸರ ಅವತಾರವೆಂಬೋದು ರಂಗದಾಸರು ತಂದೆ ಗೋಪಾಲ ವಿಠಲರ ವಚನಸತ್ಯ.

"ಕ್ಷಿತಿಯೊಳಗೆ ಗುರುವ್ಯಾಸ ತತ್ವಜ್ಞರ ।
ಸುತನೆನಿಸಿ ಸಚ್ಛಾಸ್ತ್ರವಾ ॥
ಪ್ರತಿದಿನದಿ ಪ್ರವಚನವಮಾಡುತ ।
ಹುತಭುಜನ ಮುದಬಿಡಿಸುವಾ ॥೬೮॥

ಹೀಗೆ ಇವರ ಪ್ರಸವಕಾಲಕ್ಕೆ ಆಚಾರ್ಯರು ಭೂಸ್ಪರ್ಶವಾಗದಂತೆ ಹೆತ್ತಮೇಲೆ ಆ ಕೂಸನ್ನು ತಮ್ಮ ಪವರಲ್ಲಿ ಹಾಕ್ಸಿಕೊಂಡು ಕಿವಿಯಲ್ಲಿ ಏನೋ ಉಪದೇಶಮಾಡಿ ಪುನಃ ಮಗಳಿಗೆ ಸಂರಕ್ಷಿಸಬೇಕೆಂದು ಆಜ್ಞೆ ಇತ್ತಿದ್ದರು. ಮರೆತಿರಲಿಲ್ಲ ಶ್ರೀ ಗೋಪಾಲ ಬಾಲಕನ ಆಜ್ಞೆಯಾಯಿತು. ಗೋಪಾಲದಾಸರ ಎರಡನೇ ಅವತಾರಾದ ಶ್ರೀ ಗೋಪಾಲಕೃಷ್ಣಾಚಾರ್ಯರನ್ನು ದತ್ತಪುತ್ರನಾಗಿ ಸ್ವೀಕರಿಸಿರಿ. ಶ್ರೀ ವೇಣುನಾದನ ಸುಸ್ವರವಾದ ಅಪ್ಪಣೆಯ ಆನಂದಭರದಲ್ಲಿ ಮುಳುಗಿದರು. ಸುಮುಹೂರ್ತದಲ್ಲಿ ವಿಧಿ ಪೂರ್ವಕವಾಗಿ ದತ್ತ ಮಗನನ್ನು ಮಾಡಿಕೊಂಡರು. ಮುಂದೆ ಉಪನಯನ ಶಾಸ್ತ್ರಾಭ್ಯಾಸನಡೆಯಿತು. ಪಂಡಿತೋತ್ತಮರಾದರು.

## ಮಕ್ಕಳ ಅಪಮೃತ್ಯು ಪರಿಹಾರ

೪. ಈ ಮಕ್ಕಳು ವಯಸ್ಕರಾಗಿ ಪಂಡಿತೋತ್ತಮರಾದರು. ಆಕಸ್ಮಾತ್ತಾಗಿ ವಿಷಮಜ್ವರ ಅಪಮೃತ್ಯು ಬಂದೊದಗಿದೆಂದು ಆಚಾರ್ಯರಿಗೆ ಗೊತ್ತಾಯಿತು. ಔಷಧೋಪಚಾರವೂ ನಡೆಯಿತು. ૩-೪ ಜನ ಶಿಷ್ಯರಿಗೆ ಕೆಲ ಮಂತ್ರ ಜಪಿಸಲು ಆಜ್ಞೆಮಾಡಿದರು. ಅವರಲ್ಲಿ ನೃಸಿಂಹ ಮಂತ್ರ ಮೃತ್ಯು ನಿವಾರಕ ಉಗ್ರಮಂತ್ರ ಜಪಿಸಲು ಆರುವೊಲ್ಲರು. ಜ್ಞಾನಿಗಳೂ ತಪಸ್ವಿಗಳಾದ ಅಡವಿ ಆಚಾರ್ಯರು ಅಪ್ಪಣೆಯಾದರೆ ಶ್ರೀ ನೃಸಿಂಹಮಂತ್ರ ಜಪಮಾಡುವೆನೆಂದು ವಿಜ್ಞಾಪಿಸಲು ಅಪಮೃತ್ಯು ನಿವಾರಣೆಗಾಗಿ ಶ್ರೀನೃಸಿಂಹ

ಮಂತ್ರ ಜಪಿಸಲು ಆಜ್ಞೆಯಾಯಿತು. ಉಪವಾಸದಿಂದ ತುಂಗಾನದಿ ಒಂದು ಶಳವು (ಈಗಲೂ ಆಡಿವಿಶಳವೆಂದು ನಾಮವಿದೆ) ಅಲ್ಲಿ ಕ್ಲಪ್ತಕಾಲವರಿಗೆ ಮಹಾ ಉಗ್ರ ತಪಗೈದರು.

ಇತ್ತ ಶ್ರೀ ಆಚಾರ್ಯರು ಶ್ರೀ ಗೋಪಾಲ ಕೃಷ್ಣನನ್ನು ಪ್ರಾರ್ಥಿಸುತ್ತಾರೆ. (ಪದ ೫೫) "ವಿನಯದಲಿ ವಿಜ್ಞಾಪನವಮಾಡುವೆ ಈ ತನಯನ್ನ ಪರಿಪಾಲಿಸುವದೆಂದು ನಾನು ಮುಂದೆ ಬಾಳಲಿ ಬಹುಕಾಲ ಗೋಪಾಲ ದಾಸ" ಎಂದು ಪ್ರಾರ್ಥನೆ ಗೈದಿದ್ದಾರೆ. ಶ್ರೀ ಆಡವಿ ಆಚಾರ್ಯರ ಮಂತ್ರ ಜಪಕಾಲವೂ ಮುಗಿಯಿತು. ಮಕ್ಕಳ ಅಪಮೃತ್ಯು ದೂರಾಯಿತು.

## ಶ್ರೀ ಗೋಪಾಲ ಕೃಷ್ಣನಿಗೆ ಪಂಚಾಮೃತ

ಸಿದ್ಧವಾಗಿದೆ ಸಕಲ ಪಂಚಾಮೃತ ಸಾಮಗ್ರಿಗಳು ಅರ್ಚಕರು ಶ್ರೀ ಗೋಪಾಲಕೃಷ್ಣನ ಹಿಂಬಾಗದಲ್ಲಿ ಸಿದ್ಧಪಡಿಸಿದ್ದಾರೆ. ಶ್ರೀ ಆಚಾರ್ಯರ ಆಹ್ನೀಕ ನಡೆದದೆ. ಮಧ್ಯಾಹ್ನ ಸಮಯ ವೈಶಾಖಮಾಸ, ಉಗ ಮಂತ್ರ ತಪಗೈದು ಆಡವಿ ಆಚಾರ್ಯರು ದೇವಾಲಯಕ್ಕೆ ಬಂದರು ಹೊಟ್ಟೆಯಲ್ಲಿ ಬಹು ಸಂಕಟ ಹಸಿವೆಯಾಗಿದೆ. ಸುತ್ತಲೂ ನೋಡುತ್ತಾರೆ. ಒಂದೆಡೆ ವಿಶಿಷ್ಟವಾಗಿ ಪಂಚಾಮೃತ ಸಾಮಾನು, ಹಾಲು,ಜೇನು, ತುಪ್ಪ, ಸಕ್ಕರೆ, ಮೊಸರು, ಬಾಳೆಹಣ್ಣುಗಳನ್ನಿಟ್ಟಾರೆ. ಹಸಿವೆಯ ಭರದಲ್ಲಿ ಮೈಮರದು ಶ್ರೀಗೋಪಾಲ ಕೃಷ್ಣನಿಗೆ ಆರ್ಪಿಸಿ ಎಲ್ಲ ಪದಾರ್ಥಗಳನ್ನು ಸ್ವೀಕರಿಸಿದರು. ಬಿಂಬಮೂರ್ತಿಯಾದ ಶ್ರೀ ಕೃಷ್ಣನಿಗೆ ಅಂತರಂಗ ಅಭಿಷೇಕ ಮಾಡಿದರು. ಕೃಷ್ಣಾರ್ಪಿತ ವೆಂದು ಮಲಗಿದರು.

ನಂತರ ಶ್ರೀ ಐಜಿ ಆಚಾರ್ಯರು ಬಂದು ಜ್ಞಾನ ದೃಷ್ಟಿಲಿ ನೋಡುತ್ತಾರೆ. ಅಹೋ ಶ್ರೀ ಹರಿಗೆ ಪಂಚಾಮೃತವಾಗಿದೆಂದುತಿಳಿದು, ಅಲಂಕಾರ ನೈವೇದ್ಯ ಮಾಡಿ ಮಂಗಳಾರ್ತಿಯನ್ನು ಮಾಡಲು ಪ್ರಾರಂಭಿಸಿದರು. ಇತ್ತ ಅರ್ಚಕರು ಇತರ ಶಿಷ್ಯರು ಶ್ರೀ ಗೋಪಾಲಕೃಷ್ಣಗೆ ಪಂಚಾಮೃತವೆ ಆಗಲಿಲ್ಲವೆಂದು ಮನದಲ್ಲಿ ಸಂಶಯಪಡುತ್ತಾರೆ. ಗಂಟೆಯ ಸಪ್ಪಳದಿಂದ ಶ್ರೀ ಆಡವಿ ಆಚಾರ್ಯರಿಗೆ ಎಚ್ಚರವಾಯಿತು. ಗುರುಗಳು ದೇವರಿಗೆ ಮಂಗ

ಳಾರ್ತಿ ಎತ್ತುವ ಸಮಯ ಗದಗದನೇ ನಡುಗಿ ಕಣ್ಣಿಗೆ ನೀರು ಹಚ್ಚಿಕೊಂಡು ದೇವರೆದುರಿಗೆ ಬಂದು ನಿಂತರು. ಶ್ರೀ ಆಚಾರ್ಯರು ಮಂಗಳಾರ್ತಿ ಮಾಡುವ ಸಮಯದಲ್ಲಿ ಶ್ರೀ ಗೋಪಾಲಕೃಷ್ಣ ದೇವರ ಮುಖದಿಂದ ಪಂಚಾಮೃತವು ಸೂಸುತ್ತಲಿದೆ. ಇದನ್ನು ನೋಡಿ ಎಲ್ಲರೂ ಬೆರಗಾದರು. ಮಂಗಳಾರ್ತಿ ಮಂತ್ರಪುಷ್ಪ ಮುಗಿಯಿತು. ಆ ಪಂಚಾಮೃತ ಸ್ವೀಕರಿಸಿದರು. ಇಂತು ಗುರುಶಿಷ್ಯರ ಮಹಿಮೆ ಪ್ರಕಟವಾಯಿತು. ಆನಂದದಿಂದ ತೀರ್ಥ ಪ್ರಸಾದ ಎಲ್ಲರೂ ಸ್ವೀಕರಿಸಿದರು. ಮಹಾಮಂಗಳವಾಗಿ "ಗೋಪಾಲಕೃಷ್ಣಾಚಾರ್ಯರಿಗೆ ಆರೋಗ್ಯವಾಯಿತು."

## ತಿರುಪತಿ ಯಾತ್ರಾ ಮಾರಿಕಾ ಶಾಂತಿ

ಕೆಲಕಾಲ ನಂತರ ಆಚಾರ್ಯರು ಶಿಷ್ಯಸಂಪತ್ತಿನೊಡನೆ ಶ್ರೀ ವೆಂಕಟೇಶನ ಯಾತ್ರೆಗೆ ತಿರುಪತಿಗೆ ಹೊರಟಿದ್ದಾರೆ. ತಿರುಪತಿ ವೆಂಕಟನ ಸಂದರುಶನವಾಯಿತು. ಅಲ್ಲಿ ಆಗ್ಗೆ (ದುರ್ಗಾ) ಮಾರಿಕಾ ಉಪದ್ರವ. ಜನರ ಪ್ರಾರ್ಥನೆಯಂತೆ "ಅಂಜಿಸುವದ್ಯಾಕಮ್ಮ ಕಂಜೋದ್ಭವನಮ್ಮಾ", "ಅಮ್ಮಾ ನಮ್ಮಮ್ಮ ದುರ್ಗಮ್ಮ ಅಮ್ಮಾ" ಎಂಬ (೧೫ ನೇ ಪದ) ಪದದಿಂದ ದುರ್ಗಾ ಶ್ರೀ ನೃಸಿಂಹನ ಪ್ರಾರ್ಥನೆ ಮಾಡಿ ದುರ್ಗೋಪದ್ರವ ಶಾಂತಿಗೈಸಿ ಲೋಕೋಪಕಾರ ಮಾಡಿ ಮಾರಿಯ ಭಯದಿಂದ ಉಳುಹಿದ ಮಹಾತ್ಮರಿವರು.

ಆಗ್ಗೆ ಪರಿಪರಿಯಿಂದ ವೆಂಕಟೇಶನ ಸ್ತೋತ್ರ ಮಾಡಿದ್ದಾರೆ. ಇನ್ನೊಮ್ಮೆ ಯಾತ್ರೆಗೆ ಹೋದಾಗ್ಗೆ ನವರಾತ್ರಿ ಉತ್ಸವ ಕಾಲ. ಆಚಾರ್ಯರು ಭೂವೈಕುಂಠದಲ್ಲಿ ಕಶ್ಮಲಾದಿಗಳು ಮಾಡಬಾರದೆಂಬ ಪೂರ್ವಸಂಪ್ರದಾಯದಂತೆ ೭ ಮೈಲು ಬೆಟ್ಟದ ಕೆಳಗಿಳಿದು ಮಲಮೂತ್ರ ವಿಸರ್ಜನಕ್ಕೆ ಹೋಗಿ ಬೆಟ್ಟದ ಮೇಲೆ ಏರಿ ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ ಮಾಡುತ್ತಾರೆ. ರಥೋತ್ಸವ ದಿನ ಹೊತ್ತಾಗಿದೆ. ಶ್ರೀ ವೆಂಕಟೇಶನ ಬ್ರಹ್ಮೋತ್ಸವ ನಡೆದು ರಥ ಸಾಗಿಸುತ್ತಾರೆ. ಅಪ್ಪತಿಪ್ಪನು ಭಕ್ತನ ಮಾರ್ಗ ನಿರೀಕ್ಷಿಸುತ್ತಾನೆ. ಜನರು ಏನು ಪ್ರಯತ್ನ ಮಾಡಿದರೂ ರಥ ಮುಂದೆ ಸಾಗದು. ಎಲ್ಲರೂ ದಿಗ್ಭ್ರಾಂತರಾಗಿದ್ದಾರೆ. ಆಗ್ಗೆ ಶ್ರೀ ವೆಂಕಟನು ಒಬ್ಬ ಹುಡುಗನಲ್ಲಿ ಆವೇಶಿಸಿ "ಐಜಿ ವೆಂಕಟ

ರಾಮಾಚಾರ್ಯರು ನನ್ನ ರಥದ ಸಂದರ್ಶನಾರ್ಥ ಬಂದಿಲ್ಲ. ಅವರನ್ನು ಬರಮಾಡಿರಿ" ಎಂದು ಆ ಹುಡುಗನು ನುಡಿದನು. ಮಹಾಂತನು ಬೆರಗಾಗಿ, ಇದು ಏನು ಸ್ವಾಮಿ ಭಕ್ತ ವಾತ್ಸಲ್ಯವೆಂದು ಪುಳುಕಾಂಕಿತನಾಗಿ ಭೃತ್ಯರಿಗೆ ಐಜಿ ಆಚಾರ್ಯರವನ್ನು ಹುಡುಕಿರೆಂದು ಆಜ್ಞೆಯಿತ್ತನು. ಆಗ್ಗಿ ಹತ್ತೆಂಟು ಜನ ಐಜಿ ಆಚಾರ್ಯರೆಂದು ಕೂಗುತ್ತಾ ನಡದಾರೆ. ಆಚಾರ್ಯರು ಸ್ವಾಮಿ ಪುಷ್ಕರಣಿಯಲ್ಲಿ ರಥಸ್ಥ ವೆಂಕಟನ ಧ್ಯಾನ ಮಾಡುತ್ತಾ ಸ್ನಾನ ಮಾಡುತ್ತಾರೆ. ಈ ಶಬ್ದ ಕೇಳಿದೊಡನೆ ಯಾಕಪ್ಪಾ ಎಂದು ಕೇಳಲು, ಶ್ರೀ ವೆಂಕಟನ ರಥ ಸಾಗದು ದಯಮಾಡಿರಿ ಮಹಾಂತರಾಜ್ಞೆಯಾಗಿದೆ ಎಂದು ಹೇಳಿದರು. ಅಪ್ಪಾ ತಿಮ್ಮಪ್ಪ ಬಡವನ ಮೇಲೆ ನಿನ್ನದೇನು ಕರುಣವೋ ಎಂದು ಸ್ಮರಿಸಿ ಊರ್ಧ್ವಪುಂಡ್ರ ಧಾರಣ ಮಾಡಿ ಲಗುಬಗೆಯಿಂದ ರಥದ ಹತ್ತಿರ ಬರುತ್ತಾರೆ. ಮಹಂತರು ಗೌರವದಿಂದ ಆಚಾರ್ಯರನ್ನು ಬರಮಾಡಿಕೊಂಡು ಇವರಿಂದ ಮಂಗಳಾರ್ತಿ ಮಾಡಿಸಿದರೂ ರಥ ಸಾಗದು. (ವಾಸುದೇವ ವಿಠಲರು) ಆಚಾರ್ಯರು ಆರ್ತತೆಯಿಂದ "ಯಾತರವ ನಾನಲ್ಲವೋ ಹರಿ ಬರಿದೆ ಖ್ಯಾತಿಯ ತಂದಿತ್ತಿಯೋ" ಎಂದು (೩) ನುಡಿ ಪದ ಹಾಡಿ ಪ್ರಾರ್ಥಿಸಿದೊಡನೆ ರಥ ಮುಂದಕೆ ಸಾಗಿತು. ಮಹಂತರೂ ಭಕ್ತಜನರೂ ಆನಂದ ಭರಿತರಾಗಿ ಶ್ರೀ ಐಜಿ ಆಚಾರ್ಯರನ್ನು ತುಂಬಾ ಹೊಗಳಿದರು. ಶ್ರೀಹರಿಯು ಭಕ್ತರ ಮೇಲೆ ಕರುಣಿಸಿ ಎನ್ನ ನಿಜ ಭಕ್ತರೆಂದು ಲೋಕದಲ್ಲಿ ಪ್ರಸಿದ್ಧ ಮಾಡಿದನೆಂದು ಮನದಲ್ಲಿ ಹೆಚ್ಚಿಗೆ ಭಕ್ತಿ ಅಭಿವೃದ್ಧಿಗೊಳಿಸಹತ್ತಿತು.

## ಮಂತ್ರಾಲಯಕ್ಕೆ ಆಗಮನ

ಶ್ರೀ ಐಜಿ ಆಚಾರ್ಯರು ಶ್ರೀ ಮಂತ್ರಾಲಯಕ್ಕೆ ಪ್ರಯಾಣ ಬೆಳಿಸಿದ್ದರು ಕುದುರೆಮೇಲೆ ಕಂಟಲೇ ಹೇರಿಕೊಂಡು ನಡಗಾಲಿಲೆ ಪ್ರಯಾಣ ಬೆಳಿಸಿದರು. ಹಿಂದೆ ವೇಣಿ ಸೋಮಪುರದಲ್ಲಿ ಸುಧಾಪಾಠ ಹೇಳುವಸಮಯ. ಶ್ರೀ ಗುರುರಾಜರ ಪರಿಮಳಕ್ಕೆ ಮೂಕ ಟಿಪ್ಪಣಿಯೆಂದು ನಿರಾಕರಿಸಿದ್ದರು. ಶಿಷ್ಯರ ಪ್ರಾರ್ಥನೆಗೆ ಮನ ಒಲಿಯದು. ಒಂದು ಸಮಯ ಏನೋ ಒಂದು ದುರ್ಘಟ ಘಟ್ಟಿ ಬಂದಿದೆ. ಪರಿಪಕ್ವಕಾಲ ಸಮಯ. ಏನೋ ಅಪ್ಪಾ ಎಂದು ಚಿಂತಿಸಲು ಗುರುರಾಜರು ಮೂಕಟಿಪ್ಪಣಿ ನೋಡಪ್ಪಾ ಎಂದು. ಸ್ವಪ್ನದಲ್ಲಿ ಆಜ್ಞಾಮಾಡಿ

ದರು. ಆ ಮೂಕ ಟಿಪ್ಪಣಿಯನ್ನು ತೆಗೆದು ನೋಡೋಣವೆಂದು ಹೇಳಿ ಪರಿಮಳ ಗ್ರಂಥವನ್ನು ಅವಲೋಕನ ಮಾಡಿದರು. ಎಲ್ಲ ವಿಷಯವೂ ವಿರಳವಾಗಿ ತಿಳಿದು ಕೊಂಡು ರಾಯರ ಮಹಿಮೆ ಕೊಂಡಾಡಿದರು. ಶಿಷ್ಯರಿಗೆ ಸರಿಯಾದ ಜ್ಞಾನೋಪ ದೇಶವನ್ನು ಗೈದರು. ಶ್ರೀ ಗುರುರಾಜರಲ್ಲಿ ಅತಿ ವಿಚಿತ್ರವಾದ ಭಕ್ತಿಯು ಉದ್ಭ ವಿಸಿತು. "ನಾನ್ಯಾಕೆ ಚಿಂತಿಸಲಿ ನಾನ್ಯಾಕೆ ಧೇನಿಸಲಿ ತಾನಾಗಿ ಶ್ರೀ ರಾಘ ವೇಂದ್ರಯತಿ ಯೊಲಿದ" ಎಂದು ಬಹು ಭಕ್ತಿಯಿಂದ ಶ್ರೀ ಗುರುರಾಜರನ್ನು ತುತಿಸಿದ್ದಾರೆ. ಪದ (೩) ನೋಡಿರಿ. ಮಹತ್ಮೆ ಜ್ಞಾನ ಪೂರ್ವಕ ಗುರುರಾಜರಲ್ಲಿ ಭಕ್ತಿ ಮಾಡುವರು ವಿರಳ. ಇಂಥ ಮಹಾ ಮಹಾತ್ಮರ ಸಂದರ್ಶನಾರ್ಥ ಮಹತ್ಮ ಜ್ಞಾನಿಗಳು ಬರುವದೇನಚ್ಚರ. ಮಂತ್ರಾಲಯಕ್ಕೆ ಬಂದೊಡನೆ ಬಹುಮರ್ಯಾ ದಾಪುರಸ್ಸರವಾಗಿ ಆಚಾರ್ಯರನ್ನು ಶಿಷ್ಯ ಸಮೇತರನ್ನಾಗಿ ಬರಮಾಡಿ ಕೊಂಡರು. ಶ್ರೀ ಗುರುರಾಜರ ಸೇವಾನಡೆಯಿತು. ಕೆಲವುದಿನ ಮಂತ್ರಾಲಯ ದಲ್ಲೆ ಇದ್ದು ಶ್ರೀ ಗುರುರಾಜರ ಪೂರ್ಣಾನುಗ್ರಹಕ್ಕೆ ಪಾತ್ರರಾದರು. ಶ್ರೀಗುರು ರಾಜರ ಎದುರಿಗೆ ಒಳಭಾಗದಲ್ಲಿ ಶ್ರೀ ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದರು. ಇಂದಿಗೂ ಅವರ ಪ್ರಭಾವದಿಂದ ಶ್ರೀ ರಾಯರ ಅರ್ಚಕರೇ ಪೂಜಾದಿಗಳನ್ನು ಮಾಡುತ್ತಾರೆ.

## ಮುಡಮಾಲಿ ದೇಸಾಯಿಯ ಹೊಟ್ಟೆಶೂಲೆ ಪರಿಹಾರ

ಮಂತ್ರಾಲಯದಿಂದ ಮುಂದೆ ಸಂಚಾರ ಕ್ರಮದಿಂದ ಮುಡಮಾಲಿಗೆ ಹೊರಟರು. ಮಾರ್ಗದಲ್ಲಿ ಅನೇಕ ಜನರ ಉದ್ಧಾರಗೈಯುತ್ತ ಮುಡಮಾಲ ದೇಸಾಯಿಯವರಲ್ಲಿ ಆಗಮನವಾದಿತು. ಆಚಾರ್ಯರಿಗೆ ಬಹುಮರ್ಯಾದೆ ಪುರ ಸ್ಸರವಾಗಿ ಆತಿಥ್ಯನಡೆಯಿತು. ದೇವತಾಪೂಜೆ ನೈವೇದ್ಯಗಳಾದವು. ತೀರ್ಥ ಕೊಡುವದಾಯಿತು. ಊಟಕ್ಕೆ ಎಡೆ ಮಂಡಿಸಿತು. ದೇಸಾಯಿಯವರು ಬರಲಿಲ್ಲ ಏನುಕಾರಣವೆಂದು ಕೇಳಲು, ದೇಸಾಯಿಯವರು ಬಂದು ಸನ್ನಿಧಿಯಲ್ಲಿ ನಮ್ರತೆ ಯಿಂದ ಅರಿಕೆಮಾಡಿದರು. ಮಹಾತ್ಮರೆ ನನ್ನಗೆ ಪರಿಣಾಮಶೂಲೆ ಇದೆ. ಎಷ್ಟೋದಿನಗಳಿಂದ ಊಟವಿಲ್ಲ ಅನುಗ್ರಹಿಸರಿ. ಕಷ್ಟ ದೂರಮಾಡಿರೆಂದು ಕೇಳಿ ಕೊಂಡನು. ಆಗ್ಗೆ ಶ್ರೀಗಳವರು ಉದಕವನ್ನು ಅಭಿ ಮಂತ್ರಿಸಿ ಕುಡಿಯಲು ಅಪ್ಪಣೆಯಿಸಿದರು. ದೇಸಾಯಿ ಹಾಗೆಮಾಡಿದ. ಭೋಜನಕ್ಕೆ ಆತನಿಗೆ ತಮ್ಮೆದುರಿಗೆ

ಎಲೆ ಹಾಕಿಸಿದರು. ಊಟಮಾಡುವದು ಹೇಗೆ ? ಆಗ್ಗೆ ಶ್ರೀ ಆಚಾರ್ಯರರು ತಾವು ಪುಣ್ಯಲೋಭಿಗಳಾದರೂ ಪ್ರಾಣಾಗ್ನಿ ಹೋತ್ರ ಮಾಡಿದ ೧-೨ ತುತ್ತನು ಕೊಡಲು ದೇಸಾಯಿಯ ಅಷ್ಟೇತಿಂದು ಜೀರ್ಣಿಸಿಕೊಂಡ ೧ ವಾರದಲ್ಲೇ ಆತನ್ನಿಗೆ ಗುಣಮುಖವಾದಿತು. ದೇಸಾಯಿಯವರು ಬಹು ಸಂತುಷ್ಟರಾಗಿ ಮಹಾ ಭಕ್ತಿಯಿಂದ ದೇಸಾಯಿ ತಮ್ಮ ಹಿರಿಯರಿಗೆ ಚಂದೂಲಾಲ ಹೈದರಾ ಬಾದ ರಾಜ್ಯದ ಪ್ರಧಾನಿಗಳು ಕೊಟಂಥ " **ಕೊತ್ತಪಲ್ಲಿ ಎಂಬೋ** ಜಹಗೀರಿ ಯನ್ನು ಶ್ರೀ ಪೂಜ್ಯ ಐಜಿ ಆಚಾರ್ಯರಿಗೆ ದಾನಕೊಟ್ಟು ಆ ಜಹಗಿರಿ ಆಚಾ ರ್ಯರ ಹೆಸರ್ಲೆ ಸನದು ಮಾಡಿಕೊಟ್ಟನು. ಕೊತ್ತಪಲ್ಲಿ ಜಹಗೀರಿ ಈವರೆಗೆ ವಂಶಸ್ಥರಲ್ಲಿ ನಡೆಯುತ್ತಲಿತ್ತು ಈಗ ಜಮೂನದಾರ–ಜಹಗೀರದಾದ ನಿರ್ಮೂ ಲನೆ ಕಾಯದೆಯಲ್ಲಿ ಕೆಲವು ವರಮಾನವು ಶಿಗುತ್ತದೆ. ಆಗಲಿ ಕಾಲನಾಮಕ ಹರಿಯು ಕಲಿಕಾಲದ ರಾಜ್ಯವಾಳುವ ರಾಜರಿಗೆ ಇಂಥ ಪ್ರೇರಣೆಯೆ ಘನವಾಗಿದೆ.

ಇದರಂತೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಭಕ್ತ ಭೂಪಾಲರಿಂದ ೨ ಎಕಲಾಸಪುರ, ೩ ಝೋರಾಪುರ, ೪ ಮಲ್ಲಾರಹಟ್ಟಿ, ೫ ಸರದಾರಪುರ ೬ ಶಂಕರಬಂಡಿ, ೭ ಮಾಳೆ ಸೋಮಪುರ ಜಹಗೀರಿ ಸಂಪಾದನೆ ಮಾಡಿ ದ್ದಾರೆ. ಸನದುಗಳಿವೆ ಎಲ್ಲ ಜಹಗೀರಿ ವಂಶಸ್ಥರಲ್ಲಿ ನಡೆಯುತ್ತಿದ್ದವು. ದಯಾ ಳುವಾದ ಸರಕಾರವು ಜಹಗೀರಗಳನ್ನು ಕಸಗೊಂಡು ವರಮಾನ ಕೊಡುತ್ತಾರೆ. ಕೊಡುವರೊಬ್ಬರು ಪುಣ್ಯಾತ್ಮರಿಗೆ ಭಗವಂತನೆ ಪ್ರೇರಿಸಿದ. ಕೊಟ್ಟದ್ದನ್ನು ಕಸುಗೊಳ್ಳುವರಿಗೆ ಆತನೇ ಪ್ರೇರಿಸಿದ.

ಮತ್ತು ಮಾನ್ವಿ ತಾಲೂಕದಲ್ಲಿ ಖರಾಬದಿನ್ನಿ, ಈರಲಗಡ್ಡಿ, ಈ ಗ್ರಾಮದ ಹೊಲಗಳಲ್ಲಿ ಒಂದು ಜಮೀನು ಆ ಊರಿಗೆ ಹೋದಾಗ್ಗೆ ಶ್ರೀ ಆಚಾರ್ಯರು ಆ ಮಾರ್ಗವಾಗಿ ಬಂದರು. ಬಂದಾಕ್ಷಣವೆ ತಮ್ಮ ಹಿಂದಿನ ಜನ್ಮಗಳ ಸ್ಮರಣೆ ಬಂದು ಅಲ್ಲಿ ತಾವು ಒಂದು ಕಾಲದ ಯಜ್ಞ ಸ್ಥಳವಿದೆಂದು ಅಲ್ಲಿ ಪೂಜಾದಿಗಳನ್ನು ತೀರಿಸಿ ಅಲ್ಲಿ ಒಂದು ಕಟ್ಟೆಕಟ್ಟೆಸಿರುವರು ಈಗಲೂ ಆ ಕಟ್ಟೆ ಇದೆ. ಸರ್ಪ ಕಚ್ಚಿದವರು ಈ ಕಟ್ಟೆಗೆ (೩) ಸಲ ಪ್ರದಕ್ಷಣೆ ಮಾಡಲು ಸರ್ಪ ವಿಷಭಾದೆ ನಿವಾರಣವಾಗುತ್ತದೆ. ಇತರರೂ ನಡೆದುಕೊಳ್ಳುತ್ತಾರೆ.

ಸಕಲ ಇಷ್ಟಾರ್ಥಗಳು ಪೂರೈಸುತ್ತವೆ. ಈಗಲೂ ಆ ಹೊಲಗಳು ಆಚಾರ್ಯರೂ ಸ್ವಾಮಿಗಳು ಶ್ರೀ ಹರಿಯದಾಸರ ವಂಶಜರ ಸ್ವಾಧಿನದಲ್ಲಿವೆ.

## ಶ್ರೀ ಆಚಾರ್ಯರ ಪಾದುಕಾ ಮಹಿಮೆ

ಒಂದಾನೊಂದು ಸಮಯ ಶ್ರೀ ಐಜಿ ವೆಂಕಟರಾಮಾರ್ಯರು ವೇಣಿ ಸೋಮದಲ್ಲಿ ಪಾಠ ಪ್ರವಚನ ಮಾಡುತ್ತಲಿದ್ದಾರೆ. ಐಜಿ ಗ್ರಾಮದಿಂದಒಬ್ಬ ಭಕ್ತನು ತಮ್ಮ ಮನೆಯಲ್ಲಿ ಪ್ರಯೋಜನವಿದ್ದ ಕಾರಣ ಸ್ವಂತ ಬಂದು ಶ್ರೀ ಆಚಾರ್ಯರಿಗೆ ಶಿಷ್ಯ ಸಹಿತರಾಗಿ ಐಜಿಗೆ ಬರಬೇಕಾಗಿ ವಿನಯಪೂರ್ವಕ ಕೇಳಿ ಕೊಂಡನು. ಆ ಭಕ್ತನ ವಿನಂತಿಗೆ ಮನ್ನಿಸಿ ಬರುವೆವೆಂದು ವಚನವಿತ್ತರು.

ಕ್ಲಪ್ತಕಾಲದ ದಿವಸ ಮುಂಜಾನೆ ತಮ್ಮ ಎಲ್ಲ ಶಿಷ್ಯರನ್ನು ದೇವಪೂಜಾ ಸಾಮಗ್ರಿಗಳನ್ನು ಕೊಟ್ಟು ಮುಂದೆ ಕಳಿಸಿದ್ದಾರೆ. ತಾವು ಸ್ನಾನಾನ್ಹೀಕ ಮುಗಿಸಿ ಕೊಂಡು ಕುದುರಿಯ ಮೇಲೆ ಹೊರಟಿದ್ದಾರೆ. ೪ ತಾಸು ಹೊತ್ತಾಗಿದೆ ವೈಶಾಖಮಾಸ, ಬೇಸಿಗೆ ಕಾಲ, ಸಂಗಡ ಕುದುರಿಯ ಹಿಂದೆ ಪ್ರಿಯ ಶಿಷ್ಯರಾದ ಶ್ರೀ ಅಡವಿ ಆಚಾರ್ಯರೊಬ್ಬರೇ ಇದ್ದಾರೆ ಭಗವಂತನ ವಿಚಾರ ನಡೆದಿದೆ. ೬ ತಾಸ ಆಗ ಬಂದಿದೆ, ಕಾಲು ಬಹು ಸುಡುತ್ತವೆ. ನೀವು ಬರಿಗಾಲಿನಲ್ಲೇ ಇರುವಿರಿ, ಶ್ರಮವಾಗುತ್ತದೆ· ಇಕೋ ನಮ್ಮ ಪಾದರಕ್ಷಿ ತೆಗೆದುಕೊಳ್ಳಿರೆಂದು ಅಡವಿ ಆಚಾರ್ಯರಿಗೆ ಕೊಡಲು ಗುರುಪಾದುಕೆಗಳು ದೊರೆತವಲ್ಲವೆಂದು ಹಿಗ್ಗಿ ನರು ಈಗಿನ ಶಿಷ್ಯರಂತೆ ಗುರುಪಾದರಕ್ಷೆಯನ್ನು ತಾವು ಮೆಟ್ಟಿದರೆ? ಛೀ ಇಲ್ಲ. ಗುರುಗಳ ಮಹಾತ್ಮೆಯನ್ನರಿತ ಆಚಾರ್ಯರು ತಮ್ಮ ಪಂಜೆಯಿಂದ ಧೂಳವರಿಸಿ ತಮ್ಮ ಹೊದ್ದುಕೊಳ್ಳುವ ಧೋತರದಲ್ಲಿ ಚನ್ನಾಗಿ ಕಟ್ಟಿ ತಲೆಯಮೇಲಿಟ್ಟು ಕುದುರೆಯ ಹಿಂದೆ ನಡೆದರು. ಶ್ರೀ ಆಚಾರ್ಯರ ಕುದುರೆ ಸ್ವಲ್ಪ ದೂರ ನಡೆ ದಿತ್ತು, ಆಚಾರ್ಯರು ಐಜಿಗೆ ತಲುಪಿದರು. ಶಿಷ್ಯರ ಸ್ನಾನವಾಗಿ ಪೂಜಾಕ್ಕೆ ಎಲ್ಲ ಸಿದ್ಧವಾಗಿತ್ತು, ಭಕ್ತನು ಬಹು ಸಂಭ್ರಮದಿಂದ ಆಚಾರ್ಯರನ್ನು ಸತ್ಕರಿ ಸಿದನು. ಇತ್ತ ಅಡವಿ ಆಚಾರ್ಯರು ತಲೆಯಲ್ಲಿ ಪಾದುಕೆ ಇಟ್ಟು ತೆರಳುತ್ತಾರೆ. ಸೂರ್ಯನ ಪ್ರಚಂಡ ಕಿರಣದಿಂದ ಕಾಲು ಸುಡುವದು ಹೋಯಿತು. ಪಾದದ ರಕ್ಷೆ ಇಟ್ಟಲ್ಲಿ ತಂಪು. ಹೀಗೆ ಗುರುಪಾದುಕಾ ಮಹಾತ್ಮೆ ಕೊಂಡಾಡುತ್ತಾ

ಬಂದರು. ಆಚಾರ್ಯರು ಸ್ನಾನಕ್ಕೇಳುವ ಕಾಲ ಬ ಹಿ ಭೂ ೯ ಮಿ ಗೆ ಹೊರಡಲು ಅಡವಿ ಆಚಾರ್ಯರು ಗಂಟಿನಲ್ಲಿ ಕಟ್ಟಿದ ಪಾದುಕಾವನ್ನು ಗುರುಗಳ ಚರಣರಕ್ಕರ್ಪಿಸಿ ಆನಂದಾಶ್ರುಗಳಿಂದ ಗುರುಪಾದ ಪ್ರಕ್ಷಾಲನೆಗೈದರು. ಗುರುಗಳು ಶಿಷ್ಯನ ದೃಢ ಭಕ್ತಿಯನ್ನು ನೋಡಿ ಆನಂದದಿಂದ ಶ್ರೀಹರಿಯ ಕೊಂಡಾಡಿದರು. ಅಡವಿ ಆಚಾರ್ಯರಿಗೆ ನಿನಗೆ ಶಿಷ್ಯ ಸಂಪತ್ತು ಹೆಚ್ಚಲೆಂದು ವರಪ್ರದಾನ ಮಾಡಿದರು. ಸ್ನಾನಾನ್ಹೇಕ ಪೂಜಾ ನೈವೇದ್ಯ ಉಂಟಾದವು. ಇದೇ ಗುರು ಪಾದ ಮಹಿಮೆ.

## ಐಜಿಯ ಹಳ್ಳವು ಗರುಡ ನದಿಯಾದುದು.

ಅದೇ ೨-೩ ದಿನಗಳಲ್ಲಿ ಚಂದ್ರಗ್ರಹಣಕಾಲ ಸಮಯ ಬಂದಿದೆ. ಸ್ನಾನಾರ್ಥ ತುಂಗಾ ನದಿಗೆ ಹೊರಡಲು ಸಿದ್ಧರಾದರು. ಭಕ್ತಜನರು ಆಚಾರ್ಯರನ್ನು ಬಿಡರು. ಗ್ರಹಣಕಾಲ ಅಲ್ಲೆ ಇರಬೇಕಾಯಿತು. ಗ್ರಹಣವೇಳೆ ಬಂದೊದಗಿತು ಶ್ರೀ ಆಚಾರ್ಯರು ಶಿಷ್ಯರೊಡನೆ ಐಜಿ ಹಳ್ಳಕ್ಕೆ ಸ್ನಾನಾರ್ಥ ಹೋಗಿದ್ದಾರೆ. ಪ್ರವಾಹವಿದೆ ಆಗ್ಗೆ ಆಚಾರ್ಯರು "ಕೇಶವ ಪಾದೋದ್ಭವೋದ್ಗಂಗಾ ಮಾಧವತ್ಸಂಗ ಗಾಮಿನಿ॥ ಗರುಡನದೀತೀ ವಿಖ್ಯಾತೇ ಗ್ರಹಣಾರ್ಘ್ಯಂ ನಮೋಸ್ತುತೇ" ಎಂದು ಅರ್ಘ್ಯ ಕೊಟ್ಟು ಸ್ನಾನ ಮಾಡಿದರು. ಅಂದಿನಿಂದ ಈಹಳ್ಳವು ಗರುಡ ನದಿಯೆಂದು ಪ್ರಖ್ಯಾತವಾದಿತು. "ಗಂಗಾದಿ ಸಕಲ ತೀರ್ಥಂಗಳು ಈ ಮುನಿ ಪುಂಗವರಂಘ್ರಿ ಸಂದರುಶನದೀ" ಎಂಬ ದಾಸರ ವಚನ ನಿಜ.

ಹೀಗೆ ಅನೇಕ ಮಹಿಮೆ ತೋರಿದ್ದಾರೆ. ಪುನಃ ವೇಣಿ ಸೋಮಪುರಕ್ಕೆ ಹೋಗಿದ್ದಾರೆ. ಅಲ್ಲಿ ಸತತ ಪಾಠ ಪ್ರವಚನ ಸಾಗಿದೆ. ಇತ್ತ, ಏನೋ ಲೌಕಿಕ ನಿಮಿತ್ಯ ತಮ್ಮ ವಂಶಜರ ಪೂರ್ವ ಸ್ಥಳವಾದ ದಿನ್ನಿ ಗ್ರಾಮದಿಂದ ಭಕ್ತರುಗಳಿಂದ ಆಹ್ವಾನ ಬಂದಿದೆ. ತಮ್ಮ ವಂಶಜರೂ ಬಂದಿದ್ದಾರೆ. ಇತ್ತ ಸುಧಾ ಮಂಗಳ ೧೨ನೇ ಸಲ ಮುಗಿಯುವದು ಸಮೀಪಿಸಿದೆ ಮಾಡವದೇನೆಂದು ಶ್ರೀ ಗೋಪಾಲಕೃಷ್ಣನನ್ನು ಪ್ರಾರ್ಥಿಸಿದರು. "ಶ್ರೀಹರಿಯು ಅತ್ಯಾವಶ್ಯ ನಿಮ್ಮ ಪೂರ್ವಜರ ಸ್ಥಾನಕ್ಕೆ ಹೋಗಿ ಬರಬೇಕು. ಬಹು ಜಾಗರೂಕತೆ ಇರಲಿ, ಆದರೆ ಈ ೧೨ನೇ ಸಲ ಸುಧಾ ಮಂಗಳವಾದ ಮೇಲೆ ಇನ್ನು (೬) ಸಲ ಸುಧಾ ಪಾಠ

ನಿಮ್ಮಿಂದಾಗಬೇಕೆಂದು ಆಜ್ಞಾಪಿಸಿಹನು" ಎಚ್ಚತ್ತು ದಾಸಪ್ಪದಾಸರನ್ನೂ ಕೂಗಿ ಆನಂದಭರಿತರಾದರು.

ಶ್ರೀಹರಿಯಾಜ್ಞೆಯಂತೆ ಶಿಷ್ಯಸಮೇತರಾಗಿ ದಿನ್ನಿಗೆ ಹೊರಟು ಮುಟ್ಟಿದರು. ಅಲ್ಲಿ ತಮ್ಮ ಪೂರ್ವಜರ ಹೊಲಮನೆ ಭಕ್ತರ ಕಾಣಿಕೆ ಮುಂತಾದವುಗಳನ್ನು ಸ್ವೀಕರಿಸಿ ಶೀಘ್ರದಿಂದ ವೇಣಿ ಸೋಮಪುರಕ್ಕೆ ತೆರಳಿದರು. ಶಿಷ್ಯರು ೧೦–೧೫ ಕುದುರೆಗಳು ಸಂಗಡವಿದ್ದುವು. ಮಾರ್ಗದಲ್ಲಿ ಆಚಾರ್ಯರಿಗೆ ಲಘುವಿಗೆ ಹೋಗುವ ಪ್ರಸಂಗ ಬಂದೊದಗಿತು. ಸಮೀಪದಲ್ಲೇ ಹಳ್ಳ ಎಲ್ಲರೂ ಕುದುರೆ ಇಳಿದರು. ಕುದುರೆಗಳನ್ನು ಬಿಟ್ಟು ಶಿಷ್ಯರು ಸಹ ಮಲಮೂತ್ರ ವಿಸರ್ಜನೆಗಾಗಿ ಹೊರಟರು. ಇತ್ತ ಕುದುರೆಗಳೆಲ್ಲವೂ ಸಮೀಪದ ಹೊಲದಲ್ಲಿ ಎಲ್ಲ ಕಡಲೆಗಿಡಗಳನ್ನು ತಿಂದು ಬಿಟ್ಟವು. ದೂರಿಂದ ಹೊಲದವನು ನೋಡಿ ಓಡುತ್ತ ಬಂದು ಶಿಷ್ಯರಿಗೆ ಅವಾಚ್ಯ ಶಬ್ದಗಳಿಂದ ಬೈದನು. ಜಗಳವೂ ಹತ್ತಿತು. ಇಷ್ಟರಲ್ಲೇ ಆಚಾರ್ಯರು ಬಂದು ಏನೆಂದು ಕೇಳಲು ಪುನಃ ಹೊಲದೊಡೆಯನು ಎಲೇ ಹಾರುವ ಇತ್ಯಾದಿ ಕೀಳು ಮಾತುಗಳಿಂದ ನನ್ನ ಹೊಲವೆಲ್ಲವೂ ನಾಶಮಾಡಿಬಿಟ್ಟಿರೆಂದು ಬೈಯ್ಯಲು ಆಚಾರ್ಯರು ತಾವು ವೃದ್ಧರಾಗಿದ್ದರೂ ಪೂರ್ವದಿ ರಾಜರಾಗಿ ಅವತರಿಸಿದ ಕಾರಣ ಕ್ಷಾತ್ರಧರ್ಮ ತೇಜಸ್ಸಿನಿಂದ ಎಲೈ ನಾನು ದೃಷ್ಟದ್ಯುಮ್ನನಿದ್ದೇನೆ. ನಿಲ್ಲೆಂದು ಅವನ ಕೈಯಲ್ಲಿದ್ದ ಕಬ್ಬಿಣದ ದೊಡ್ಡ ಗಡಾರ (ಹಾರಿ) ವನ್ನು ಕಸಿದು ತಮ್ಮ ಶಕ್ತಿಯಿಂದ ಬಗ್ಗಿಸಿ ದುಂಡಾಕಾರ (ಸರಿಗೆಯಂತೆ) ಮಾಡಿ ಅವನ ಕೊರಳೊಳಗೆ ಹಾಕಿದರು. ಆ ಹೊಲದವನು ಗದ-ಗದನೆ ನಡುಗಿ ನಾನು ಉಳಿದರೆ ಸಾಕೆಂದು ಸಮ್ಮನಾದನು.

ಇತ್ತ ಆಚಾರ್ಯರು ಹೊರಟು ವೇಣಿ ಸೋಮಪುರಕ್ಕೆ ಬಂದು ಮುಟ್ಟಿಕೊಂಡರು ದಾಸಪ್ಪ ದಾಸರಿಗೆ ತಿಳಿಸಿದರು. ವೃಥಾ ನಮ್ಮ ಸ್ವರೂಪ ಬೈಲಿಗೆ ಬಿದ್ದಿತು. ದೇವತೆಗಳ ಸ್ವರೂಪ ಆ ವಿಭಾಗದನಂತರ ಅವತಾರ ಸಮಾಪ್ತಿಕಾಲ ಒದಗಿತು. ಶ್ರೀ ಕೃಷ್ಣನ ಆಜ್ಞೆ-ಇನ್ನು ೬ ಸಾರೆ ಸುಧಾಪಾಠ ಹಾಗಲಿ ಏನು ಮಾಡುವದು ಹರಿಯೇ ಎಂದು ಪ್ರಾರ್ಥಿಸುತ್ತಿದ್ದರು. ದಾಸಪ್ಪ ದಾಸರು ಹರಿ ಪ್ರೇರಣೆಯಿಂದ ವಿಜ್ಞಾಪಿಸಿದ್ದೇನೆಂದರೆ ತಾವು ಕೆಲವುದಿನ ವಾನಪ್ರಸ್ಥಾಶ್ರಮವನ್ನಾಚರಿಸಿ ಮುಂದೆ ಯತ್ಯಾಶ್ರಮ ತೆಗೆದುಕೊಂಡರೆ ಎರಡನೇ ಜನ್ಮಾಂತರವಾಗುವದು. ಸಾಧನವೂ ಸಾಗುವದು. ಹೀಗೆ ಪ್ರಾರ್ಥಿಸಲು—

## ವಾನ ಪ್ರಸ್ಥಾಶ್ರಮ

ಶ್ರೀ ಆಚಾರ್ಯರು ನದಿಗಡ್ಡಿ ನೀರುಬಾರದೆ ಇದ್ದ ಸ್ಥಳದಲ್ಲಿ ಚಪ್ಪರವನ್ನು ಹಾಕಿಸಿ ೨ ವರ್ಷ ಪರಿಯಂತರ ಗಡ್ಡೆ-ಗೆಣಸುಗಳು ಹರಿಗೆ ಅರ್ಪಿಸಿ ಸೇವಿಸು ತ್ತಿದ್ದರು. ಆದರೆ ಶೀಷ್ಯರಿಗೆ ಪಾಠ ಪ್ರವಚನಾದಿಗಳು ನಡದೇ ಇದ್ದವು. ಈ ಕಾಲದಲ್ಲಿಯೂ ಬಹು ಮಹಾತ್ಮೆ ತೋರಿದ್ದಾರೆ.

೨ ವರ್ಷ ವಾನ ಪ್ರಸ್ಥಾಶ್ರಮ ಮುಗಿಯಿತು. ಸನ್ಯಾಸ ಸ್ವೀಕಾರಮಾಡಲು ಹರಿಪ್ರೇರಣೆಯಿಂದ ಮನಸ್ಸಾಯಿತು. ಆಗಿನಕಾಲದಲ್ಲಿ ಅದೇ ಗದ್ವಾಲ ಇಲಾಖೆ ರಾಜೊಳ್ಳಿಯಲ್ಲಿ ವಿರಾಜಮಾನರಾದ ಶ್ರೀಗುರು ರಾಘವೇಂದ್ರ ಪೀಠಿಗೆಯಲ್ಲಿರುವ ಮಹಾತ್ಮರೂ ಜ್ಞಾನಿಗಳೂ ಆದ-

**ಶ್ರೀ ಭುವನೇಂದ್ರ ತೀರ್ಥರಲ್ಲಿ ಯತಾಶ್ರಮ ವಿಷಯ ಪ್ರಾರ್ಥನೆ** ಮಾಡಿಕೊಂಡರು. ಆಗ್ಗೆ ಶ್ರೀ ಪರಮಂಹಸರೂ ಪಿಠಾಧಿಪತಿಗಳೂ ಜ್ಞಾನಿ ಗಳೂ ಆದ ಶ್ರೀ ಭುವನೇಂದ್ರರು ಆಗಲಿ! ನೀವು ಭಾಗವತ ಸಪ್ತಮಸ್ಕಂದಕ್ಕೆ ಟಿಪ್ಪಣಿ ಮಾಡಿರೆಂದು ಆಜ್ಞಾಪಿಸಿದರು. ಆಗ್ಗೆ ಸ್ವಲ್ಪ ದಿನಗಳಲ್ಲಿಯೇ ಶ್ರೀಮದ್ಭಾ ಗವತ ಸಪ್ತಮಸ್ಕಂಧಕ್ಕೆ ಮಂದನಂದಿನಿ ಎಂಬ ವ್ಯಾಖ್ಯಾನವನ್ನು ಮಾಡಿ ಗುರುಗಳ ಚರಣಕ್ಕರ್ಪಿಸಲು, ಗುರುಗಳು ಆನಂದ ಭರಿತರಾಗಿ ಶ್ರೀ ಐಜಿ ವೆಂಕಟ ರಾಮಾಚಾರ್ಯರಿಗೆ ತುರ್ಯಾಶ್ರಮವನ್ನಿತ್ತು, **ಶ್ರೀವ್ಯಾಸ ತತ್ವಜ್ಞ** ತೀರ್ಥ ರೆಂದು—

## ಯತ್ಯಾಶ್ರಮ

ನಾಮಕರಣ ಮಾಡಿ ಪೂರ್ಣಾನುಗ್ರಹಿಸಿದರು. ಶ್ರೀ ವಿಬುಧೇಂದ ಕರಾರ್ಚಿತ ಷೋಡಶ ಬಾಹು ನರಸಿಂಹ ದೇವರನ್ನು ಪೂಜೆ ಮಾಡಲು ಶಿಷ್ಯರಾದ ಶ್ರೀ ವ್ಯಾಸ ತತ್ವಜ್ಞರಿಗೆ ಅನುಗ್ರಹಿಸಿದರು. ಗುರ್ವಾಜ್ಞೆಯಂತೆ ಕೆಲವು ಕಾಲ ಸಂಸ್ಥಾನದ ಮೂಲ ರಾಮ ದೇವರನ್ನು ಅರ್ಚಿಸಿದರು. ನಂತರ ಸಂಸ್ಥಾನಾಧಿಪತ್ಯ ನನಗೆ ಬೇಕಿಲ್ಲವೆಂದು ವೈರಾಗ್ಯ ಹೊಂದಿ ವಿರಕ್ತರಾಗಿ ವೇಣಿ ಸೋಮಪುರಕ್ಕೆ ಬಂದು ಶ್ರೀರಾಮವಿಠಲ ಹಯವದನ ನರಹರಿ

ಮೂರ್ತಿಗಳ ಉಪಾಸನೆ, ಅರ್ಚನೆ ಮಾಡುತ್ತಲಿದ್ದು ಪಾಠ ಪ್ರವಚನ ಸಾಗಿತು. ಆಗ್ಗೆ ಸುಮಾರು ೭೮ ವರ್ಷ ವೃದ್ಧರಾಗಿದ್ದರು. ತರುಣರಂತೆ ಸ್ಫೂರ್ತಿ ಆಚರಣೆಯಿತ್ತು. ಆದರೂ ೧೬ ಬಾಹು ಶ್ರೀ ನರಸಿಂಹ ದೇವರ ಪೂಜಾ ಮಾಡುವ ಕಾಲ.

ಸೃತಿವಾರುಧಿಯೊಳಗೆ ಶಳವಿಂಗೆ ಪೋಗುವಗೆ ಎಂಬೋಸುಳಾದಿ (೫) ಮಟ್ಟತಾಳದಲ್ಲಿ—

" ಮುದುಕಿಯು ಕೈಯ್ಯಲ್ಲಿ ಪುಲಿನಶವಾದಂತೆ ಮುದಡನ ಕೈಯ್ಯಲ್ಲಿ ಸಿಕ್ಕಿದ್ಯೋ ನರಹರಿಯೆ ಒದಗಿಸೇವೇಯಮಾಡಲಾರೆ ಜರೆಯು ಬಂತೆಂದು" ಆರ್ತತೆಯಿಂದ ಶ್ರೀ ಹರಿಯನ್ನು ಪ್ರಾರ್ಥಿಸಿದ್ದಾರೆ. ಮತ್ತು ಸುಳಾದಿ (೫೪) ಏಳಲಾರೆ ವೃದ್ಧ ಕೇಳಲಾರೆ ಇತ್ಯಾದಿ ಬಹುಬಗೆಯಿಂದ ಪ್ರಾರ್ಥಿಸಿ ಇನ್ನೊಂದು ಪದದಲ್ಲಿ ದಿಂಡೆಯರಕಾಟ ತಪ್ಪಿಸೆಂದು ಪಾರ್ಥಿಸಿದ್ದಾರೆ. ಭಗವಂತನ ಹೊರತಾಗಿ ಇನ್ನೊಂದು ಬೇಕಾಗಿಲ್ಲ. ಅಂತರಂಗ ಸಾಧನ ನಡೆದಿದೆ. ಅನೇಕ ಮಹಿಮೆ ತೋರಹತ್ತಿದ್ದಾರೆ. ಅನೇಕ ಪದ ಪದ್ಯಗಳನ್ನು ಸಂಸ್ಕೃತದಲ್ಲಿ ಗ್ರಂಥರಚನ ಮಾಡುತ್ತಾರೆ ಎಷ್ಟು ಶ್ರೀ ಹರಿಸ್ತೋತ್ರ ಮಾಡಿದರೂ ಸಾಲದು.

ಇವರ ಗ್ರಂಥ ರಚನೆಯು ಸಂಸ್ಕೃತದಲ್ಲಿ— ೧. ಮಾನಸಸ್ಮೃತಿ ಉಪಾಸನಾ ಭಾಗ, ೨. ಸಪ್ತಮಸ್ಕಂಧ ಭಾಗವತ ಮಂದನಂದಿನಿಟೀಕಾ, ೩. ಗಾಯತ್ರೀಸಾರ ಸಂಗ್ರಹ, ೪. ಉಭಯಾನೌಚಿತಿ ೫. ಸುಧಾ ದ್ವ್ಯಕ್ಷರಹಸ್ಯ, ೬. ನ್ಯಾಯಾಮೃತ ಮಕ್ಷಿಕಾ ವ್ಯಜನ, ೭. ಚಂದ್ರಿಕಾ ಶರದಾಗಮ ೮. ಅದ್ವೈತಿ ಕುಟ್ಟನ ೯. ನ್ಯಾಯದಮನ, ೧೦. ಕುಲಿಶ ಮೊದಲಾದ ಗ್ರಂಥಗಳಲ್ಲದೇ ಶ್ರೀ ಮದ್ವಿಷ್ಣು ತತ್ವನಿರ್ಣಯಕ್ಕೆ ೧೧. ಲಘು ಪ್ರಭಾ ೧೨ ಗುರುಪ್ರಭಾ ಮತ್ತು ಸುಧಾ ಪ್ರಮಾಣಾಧಿಕರಣಕ್ಕೆ ೧೩. ರಸ ರಂಜಿನೀ ಎಂಬ ಟಿಪ್ಪಣ ಬರೆದುದಿರುವರೆಂದು ತಿಳಿದಿದೆ. ಇವುಗಳಲ್ಲಿ ಕೆಲವು ಗ್ರಂಥಗಳು ಉಪಲಬ್ಧವೇ ಇಲ್ಲ. ಮಾನಸಸ್ಮೃತಿ ಸಪ್ತಮಸ್ಕಂದಭಾಗವತ ಟೀಕಾ ಗಾಯತ್ರೀಸಾರ ಸಂಗ್ರಹ ಸಾಮಾನ್ಯರಿಗೆ ಅರ್ಥವಾಗುವಂತಿಲ್ಲ. ಗುರು

ಪ್ರಭಾ ಲಘು ಪ್ರಭಾ ಬಹು ಕಠಿಣ ಗ್ರಂಥಗಳೆಂದು ಅನೇಕ ಪಂಡಿತರು ಹೇಳು ತ್ತಾರೆ. ದೇವರು ಇವರ ಸಂಗಡ ಕುಣಿದಾಡಿದ್ದಾನೆ. ನಲಿದಿದ್ದಾನೆ. ಪದಗಳು ಅನೇಕ ಬಹು ಭಕ್ತಿರಸ ಗುಹ್ಯಭಾಷೆಗಳಾದವು. ?ಂಳಾದಿಗಳು ಒಂದು ನೂರು ರಚಿಸಿರುವರೆಂದು ಹೇಳುತ್ತಾರೆ. ಇವುಗಳ ವಿಮರ್ಶೆ ಸಾಹಿತ್ಯ ಸಾಂಗತ್ಯ ದೃಷ್ಟಿಯಿಂದ ಮುಂದೆ ಮಾಡುವದಾಗಿದೆ. ಅವರೆ ಮಾಡಿಸ ಬೇಕಾಗಿದೆ.

## ತುಂಗಾನದಿಯು ಇವರ ಬಿಡಾರದಹತ್ತಿರ ಬರುವಿಕೆ

ತುಂಗಾ ಇವರಿರುವ ಆಶ್ರಮದಿಂದ ಸ್ವಲ್ಪದೂರ. ವೃದ್ಧರಾದ ಶ್ರೀಗ ಳವರು ತುಂಗೆಯನ್ನು ಪ್ರಾರ್ಥಿಸುತ್ತಾರೆ ಅಮ್ಮಾ ನಾನು ವೃದ್ಧ. ದೂರ ನಿನ್ನ ಸ್ನಾನಕ್ಕೆ ಬರಲಾರೆನೆಂದು ಪ್ರಾರ್ಥಿಸಿದರು. ಆಗ್ಗೆ ಸ್ವಪ್ನದಲ್ಲಿ ದಿವ್ಯ ಸುಂದರರೂಪ ತೆಗೆದುಕೊಂಡು ತುಂಗಾ ದೇವಿಯು ಹಾಗೇ ಆಗಲಿ ಸ್ವಾಮಿ ನಾಳೆ ತಾವು ದಂಡವನ್ನು ಕೊರೆದು ಗೆರೆಹಾಕಿ ತೋರಿದರೆ ಹಾಂಗೆ ಪ್ರವಾಹ ರೂಪದಿಂದ ಬರುವೆನೆಂದು ಹೇಳಿದಳು. ಮುಂಜಾನೆ ಶಿಷ್ಯರೊಡನೆ ಸ್ನಾನಕ್ಕೆ ಹೋಗಿ ಸ್ನಾನಮಾಡಿ ಆನ್ಹೀಕ ಮುಗಿಸಿ ಬರುವಾಗ್ಗೆ ದಂಡದಿಂದ ಕೋಟೆ ಗೋಡೆಯ ಸಮೀಪಕ್ಕೆ ಬರುವಂತೆ ಶ್ರೀಗಳವು ಗೆರೆಕೊರೆದರು. ಸಾಮಾ ನ್ಯವಾಗಿ ಆ ಗೆರೆಯಲ್ಲೇ ಬರಹತ್ತಿದಳು. ಮರುದಿನ ಮುಂಜಾನೆ ಸರಿಯಾದ ಪ್ರವಾಹ ಬಂದಿದೆ. ಈ ಅಮಾನುಷ ವ್ಯಾಪಾರ ನೋಡಿ ಜನರು ಬೆರಗಾದರು.

## ಹಂಪೆಯಲ್ಲಿ ವಿರುಪಾಕ್ಷನ ರಥ ಸಂರಕ್ಷಣೆ

ವೇಣಿ ಸೋಮಪುರದಲ್ಲಿ ಒಂದು ದಿನ ಮಧ್ಯಾಹ್ನ ಸಮಯ. ಶ್ರೀಗಳ ವರು ಆನ್ಹೀಕಕ್ಕೆ ಕುಳಿತಿರುವರು. ಸ್ವಾಮಿಗಳು ಗಾಬರಿಯಾಗಿ ಎದ್ದು ನೀರು ಉಗ್ಗುತ್ತಾರೆ. ಜನರಿಗೆಲ್ಲ ಆಶ್ಚರ್ಯದಿಂದ ಇದೇನು ಸ್ವಾಮಿ ಎನ್ನಲು ಹಂಪಿಯಲ್ಲಿ ಶ್ರೀ ವಿರುಪಾಕ್ಷನ ರಥಕ್ಕೆ ಅಗ್ನಿ ಹಚ್ಚಿದ್ದಾರೆ. ಶಾಂತ್ಯರ್ಥ ವಾಗಿ ನೀರು ಉಗ್ಗಿ ಆರಿಸಿದೆವೆಂದರು. ಜನರು ಬೆರಗಾದರು ಹಂಪಿಯಲ್ಲೇ ಸೋಮಪುರವೆಲ್ಲೆ ಇದು ಹೇಗೆ ? ಎಂದು ಕೇಳಲು ಅದು ಹಾಗೆ ಅಪ್ಪಾ ಎಂದು ಹೇಳಿದರು. ದೇವತೆಗಳಾದ ಯೋಗಿಗಳಿಗೆ ಇದು ಅಚ್ಚರಿಯೆ?

ಕೆಲವು ದಿನ ನಂತರ ಈ ಪ್ರಾಂತದವರು ಹಂಪಿಯ ಉತ್ಸವಕ್ಕೆ ಹೋದವರು ತಿರುಗಿ ಬಂದು ಶ್ರೀ ಸ್ವಾಮಿಗಳವರು ರಥಕ್ಕೆ ಬೆಂಕಿ ಹತ್ತಿದ ವೇಳೆಯಲ್ಲಿ ಬಂದು ತಮ್ಮ ಶಕ್ತಿಯಿಂದ ಅನೇಕ ರೂಪಧರಿಸಿ ನೀರು ಸುರಿದು ಅಗ್ನಿ ಶಾಂತ ಮಾಡಿದ ಮಹಾ ಪ್ರಭುಗಳೆಂದು ಸ್ತೋತ್ರಮಾಡಿ ನಮಿಸಿದರು ಇವರು ಮಹಾ ಯೋಗಿ ಪುರುಷರೆಂದು ಮತ್ತೂ ಹೆಚ್ಚಿಗೆ ಸ್ತೋತ್ರ ಮಾಡ ಹತ್ತಿದರು.

ಶ್ರೀಗಳವರು ಆಗಾಗ್ಗೆ ಅಸಂಪ್ರಜ್ಞಾತ ಸಮಾಧಿಯಲ್ಲಿ ಭಗವಂತನ ಧ್ಯಾನ ಮಾಡುತ್ತಿದ್ದರು. ಒಂದಾನೊಂದು ಸಮಯ ಪಾಠ ನಡೆದಿದೆ. ಶ್ರೀ ದಾಸಪ್ಪದಾಸರು ಹತ್ತಿರ ಕುಳಿತಿರುವರು. ಶ್ರೀಗಳವರು ಕಣ್ಣುಮುಚ್ಚಿ ಆನಂದ ಭರಿತರಾಗಿದ್ದಾರೆ. “ ಶ್ರೀ ಗೋಪಾಲಕೃಷ್ಣ ದೇವರು ಗೋವುಗ ಳೊಡನೆ ಮಂದಹಾಸ ಬೀರುತ್ತ ಶ್ರೀಗಳವರೆಡೆಗೆ ಬಂದು ಹಾಸ್ಯದಿಂದ ನಟನಮಾಡುತ್ತಾ ಗುಡಿಯೊಳಗೆ ಪ್ರವೇಶಮಾಡಿದ. ಶ್ರೀ ವರದಗೋಪಾಲ ವಿಠಲರು ಮೈಮರೆದು ಶ್ರೀಕೃಷ್ಣನ ಸಂದರ್ಶನಮಾಡಿ ಶ್ರೀ ಕೃಷ್ಣ ಗೋವು ಗಳೊಡನೆ ಬಂದನೆಂದು ಮೈಮರೆತು ಅನ್ನಲು, ಶಿಷ್ಯರುಗಳೆಲ್ಲ ಗೋವು ಗಳೆಲ್ಲ ಬರುತ್ತವೆ, ಶಗಣಿ ಮೂತ್ರಾದಿಗಳು ಮಾಡುವವೆಂದು ಶಿಷ್ಯರು ಎಲ್ಲ ಪುಸ್ತಕ ಮುಚ್ಚಿದ್ದಾರೆ ಶ್ರೀಗಳವರು ಆನಂದ ಭರದಿಂದ ಮೈಮರೆತು “ಬಂದಾ ಕೃಷ್ಣಾ ಛಂದದಿಂದ ಬಂದು ನೋಡೆ” ಎಂಬುವ (೩) ನುಡಿ ಪದ ಹಾಡಿ ಶ್ರೀ ಕೃಷ್ಣನ ಸ್ತೋತ್ರ ಮಾಡಿದರು. ಕೆಲಕಾಲ ಮೇಲೆ ಮೈಮೇಲೆ ಪ್ರಜ್ಞಾ ಬಂದಿತು. ಪಾಠಸಾಗಲಿ ಎಂದು ಆಜ್ಞೆಯಾಯಿತು. ಶಿಷ್ಯರು ಪುಸ್ತಕ ಬಿಚ್ಚುತ್ತಾರೆ. ಕೆಲ ಶಿಷ್ಯರ ಪುಸ್ತಕದಲ್ಲಿ ಶಗಣಿಹತ್ತಿದೆ. ನೋಡಿ ಜನರಿ ಗಾಶ್ಚರ್ಯವಾಯಿತು. ಇಂತು ಹರಿಯು ಅನೇಕ ಲೀಲೆಗಳನ್ನು ತೋರಿರು ವನು. ಅವರ ಪದ ಸುಳಾದಿಗಳ ಮೇಲಿಂದ ಗೊತ್ತಾಗುತ್ತದೆ ಸೂಜ್ಞರು ನೋಡಿ ತಿಳಿಯಬಹುದು.

## ಪೂನಾದ ಪಂಡಿತ ಸಭೆಯಲ್ಲಿ ಶಿಷ್ಯರ ಜಯ

ಪೂನಾ ಸಭೆಗೆ ಶ್ರೀಮಂತರ ಆಹ್ವಾನ ಪ್ರಕಾರಕ್ಕೆ ತಾವು ವೃದ್ಧರಾದ ಕಾರಣ ಹೋಗದೇ ಮಂತ್ರಾಕ್ಷತೆ ಕೊಟ್ಟು ೪ ಜನ ಶಿಷ್ಯರನ್ನು ಕಳಿಸಿದರು.

ಇವರು ಶ್ರೀಗಳವರಲ್ಲಿ ಓದಿ ಒಬ್ಬೊಬ್ಬರು ಚತುಃಶಾಸ್ತ್ರ ಪಂಡಿತ ಶ್ರೇಷ್ಠರಾಗಿದ್ದರು. ಅಲ್ಲಿಯ ಸಭೆಯ ಕಟ್ಟಳೆಯಂತೆ ತಮ್ಮ ತಮ್ಮ ಗುರುಗಳು ಒಬ್ಬರೇ ಎಂದು ಹೆಸರು ಬರೆಸಿದರು. ವಾಕ್ಯಾರ್ಥ ವಿಚಾರವಾದಿತು. ತಮ್ಮ ತಮ್ಮ ಶಾಸ್ತ್ರದಲ್ಲಿ ನಾಲ್ಕು ಜನರು ವಿಜಯಪ್ರದರಾದರು. ಉತ್ತಮ ಸಂಭಾವನೆಯಾದಿತು. ಧರ್ಮಾಧಿಕಾರಿಗಳು ಶ್ರೀಮಂತರು ಒಬ್ಬ ಗುರುಗಳಿಗೆ ೪ ಜನ ಶಿಷ್ಯರು ಚತುಃಶಾಸ್ತ್ರ ಪಂಡಿತರಾಗಿದ್ದಾರೆ "ಏಕಸ್ಮಿನ್ನಜನ್ಮನಿ ಏಕಮೇವ ಶಾಸ್ತ್ರ" ಒಂದು ಜನ್ಮದಲ್ಲಿ ಒಂದೇ ಶಾಸ್ತ್ರ ಪಂಡಿತರಾಗಿರುವದು ದುಸ್ತರ. ಇವರ ಗುರುಗಳಾದ ಶ್ರೀ ಐಜಿ ಆಚಾರ್ಯರೂ ಶಿಷ್ಯರು ಚತುಃಶಾಸ್ತ್ರ ಪಂಡಿತೋತ್ತಮರೆಂದು ಗುರು ಶಿಷ್ಯರ ಮಹಿಮೆ ಹೊಗಳಿ; ಗುರುಗಳಿಗೂ ಸಹ ಉತ್ತಮ ಸಂಭಾವನೆ ಕಳುಹಿದರು. ದಿಗ್ವಿಜಯಿರಾದ ಶಿಷ್ಯರು ಎಲ್ಲ ಭೂಷಣಗಳನ್ನು ಗುರುಗಳ ಪಾದಾರವಿಂದದಲ್ಲೇ ಅರ್ಪಿಸಿದರು.

## ಆರಣಿ-ಸಂಸ್ಥಾನದಲ್ಲಿ ೪ ಜನ ಶಿಷ್ಯರ ಜಯ

ಆರಣಿ ಸಂಸ್ಥಾನ ಸಭೆಗೆ ಶ್ರೀಗಳವರಿಗೆ ಆಹ್ವಾನ ಪತ್ರ ಬಂದಿತ್ತು. ಇದೇ ೪ ಜನ ಶಿಷ್ಯರನ್ನು ಮಂತ್ರಾಕ್ಷತೆ ಕೊಟ್ಟು ಕಳುಹಿದರು. ಮತ್ತು ಅಲ್ಲಿಯ ನಿಯಮ ಪ್ರಕಾರ ನೀವು ಜಯ ಹೊಂದಿ ಬೋರಲ ಹಾಕಿದ ನಗಾರಿಯನ್ನು ತರಬೇಕೆಂದು ಆಜ್ಞಾ ಮಾಡಿದರು. ಶಿಷ್ಯರು ಆರಣಿ ಸಂಸ್ಥಾನ ಸಭೆಗೆ ಹೋಗಿ ಎಲ್ಲ ಪಂಡಿತರನ್ನು ಗೆಲಿದು ಉತ್ತಮ ಸಂಭಾವನೆ ಪಡೆದು ಬೋರಲ ಹಾಕಿದ ನಗಾರಿಯನ್ನು ಜಯ ಪತ್ರಿಕೆಯನ್ನೂ ಸಹ ತಂದು ಗುರುಗಳ ಚರಣಕರ್ಪಿಸಿ ಕೃತಾರ್ಥರಾದರು. ಇಂತು ಗುರುಗಳ ತ್ರಿಕಾಲಜ್ಞತೆ.

## ಬ್ರಹ್ಮರಾಕ್ಷಸ ಜನ್ಮ ನಿವಾರಣೆ

ಶ್ರೀಗಳವರ ಶಿಷ್ಯರಲ್ಲಿ ಕಲ್ಲೂರ ಭೀಮಾಚಾರ್ಯರೆಂಬವರು ಮಹಾ ಪಂಡಿತರು ವಾಂಜ್ಮಿಗಳು ಒಂದು ಸಮಯ ಶ್ರೀ ಮಂತ್ರಾಲಯ ಗುರುರಾಜರ ಸಂದರ್ಶನಕ್ಕೆ ಹೋಗಲು ಅಪ್ಪಣೆ ಕೇಳಲು ಗುರುಗಳು ಅಪ್ಪಣೆ ಕೊಡಲಿಲ್ಲ. ವಾದರೂ ಕೆಲದಿನಗಳ ಮೇಲೆ ಶಿಷ್ಯನ ಹಟದಿಂದ ಗುರುರಾಜರ ದರ್ಶನಕ್ಕೆ ಹೋಗಿ ಬಾ. ಆದರೆ ಬಾಯಿ ಬಿಗಿಹಿಡಿ ಎಂದು ಕಳುಹಿದರು. ಆಚಾರ್ಯರು

ಮಂತ್ರಾಲಯಕ್ಕೆ ಬಂದು ರಾಯರ ಸನ್ನಿಧಿ ಸ್ನಾನಾನ್ಹೀಕಗಳನ್ನು ಮಾಡಿ ಕೊಂಡು ಬಂದು ಶ್ರೀ ರಾಯರ ಸಂದರ್ಶನ ಪ್ರದಕ್ಷಣೆ ನಮಸ್ಕಾರ ಮಾಡು ತ್ತಾರೆ. ಅಲ್ಲಿ ಒಬ್ಬ ಭಕ್ತಶ್ರೇಷ್ಠರು ಸುಧಾ ಪಾರಾಯಣ ಮಾಡುತ್ತಾ ಕುಳಿತಿ ರುವರು. ವಾಗಾಭಿನಿದೇವತೆಯು ಆ ಪಾರಾಯಣ ಕರ್ತೃಗಳ ಬಾಯಿಂದ ಅಕಸ್ಮಾತ ಏನೋ ಅಪಶಬ್ದ ಹೊರಟಿತು. ಇದನ್ನು ಆಚಾರ್ಯರು ಕೇಳಿದ ಕೂಡಲೇ ಸಹನ ಮಾಡದೇ ಇದೇನು ಅಪಶಬ್ದ ನುಡಿದಿರಿ ಎಂದು ಗದರಿ ಸಿದರು. ಆ ಬ್ರಾಹ್ಮಣರು ನೊಂದುಕೊಂಡರು. ಬ್ರಾಹ್ಮಣರಿಂದ ಒಂದುವೇಳೆ ಅಕಸ್ಮಾತ್ತಾಗಿ ತಪ್ಪಾದರೂ ಆ ತಪ್ಪು ಎಣಿಸಲು ಬಾರದು ಎಣಿಸಿದರೆ ತಪ್ಪು ಗಣನೆ ಮಾಡಿದವನಿಗೆ ಆ ಪಾಪ. ಹೀಗೆ ಭೀಮಾಚಾರ್ಯರು ಬ್ರಾಹ್ಮಣರ ಮನ ನೋಯಿಸಿದಕ್ಕೆ ಬ್ರಹ್ಮದ್ರೋಹ ಸಂಪಾದನೆ ಮಾತ್ರ ವಾಯಿತು. ಇದು ಅವರಿಗೆ ತಿಳಿಯಲಿಲ್ಲ. ಶ್ರೀ ಗುರುರಾಜರ ತೀರ್ಥಪ್ರಸಾದ ತೆಗೆದುಕೊಂಡು ಊರಿಗೆ ಬಂದು ಗುರುಗಳಾದ ಶ್ರೀ ವ್ಯಾಸತತ್ವಜ್ಞರಿಗೆರಗಲು ತ್ರಿಕಾಲದರ್ಶಿಗಳಾದ ಶ್ರೀಗಳವರು ನೀನು ಬ್ರಹ್ಮಹತ್ಯಾ ದೋಷ ಕಟ್ಟಿಕೊಂಡು ಬಂದಿ. ನಿನ್ನ ಪ್ರಾರಭ್ದಾನುಸಾರ ಆಯುಷ್ಯ ಹರಣವಾಗಿದೆ ಊರಿಗೆ ಹೋಗಿ ಬಾ ಎಂದು ಮಂತ್ರಾಕ್ಷತೆಕೊಟ್ಟರು. ಊರಿಗೆ ಬಂದರು ಸ್ವಲ್ಪ ದಿನಗಳಲ್ಲೇ ಜಡ್ಡಾಗಿ ಮೃತರಾದರು. ಪಂಡಿತ ಶ್ರೇಷ್ಠ ಭಕ್ತರಾದ ಬ್ರಾಹ್ಮಣರಿಗೆ ಮನೋವ್ಯಥೆ ಕೊಟ್ಟ ದೋಷದಿಂದ ಬ್ರಹ್ಮರಾಕ್ಷಸ ಜನ್ಮ ಬಂದಿತು. ಅತ್ತಿತ್ತ ಅರಣ್ಯ ಸಂಚಾರ ಮಾಡಿ ವೇಣಿ ಸೋಮಪುರಕ್ಕೆ ಬಂದು ನದೀ ತೀರ ಅರಳಿ ಗಿಡದಲ್ಲಿ ಬ್ರಹ್ಮರಾಕ್ಷಸ ವಾಸಮಾಡಿತು. ಪ್ರತಿನಿತ್ಯ ಅಳಲಿಕ್ಕೆ ಪ್ರಾರಂಭಿ ಸಿತು. ಒಂದು ದಿನ ದಾಸಪ್ಪ ದಾಸರು ಹೋಗುತ್ತಲಿದ್ದರು. ದಾಸರಿಗೆ ಮೊರೆ ಇಟ್ಟಿತು. ಕರುಣಿಗಳಾದ ದಾಸರು ನಾಳೆ ಶ್ರೀಗಳವರು ಬಹಿರ್ಭೂ ಮಿಗೆ ಹೋಗಿಬರುವ ಕಾಲ ನೀನು ಅವರನ್ನು ಪ್ರಾರ್ಥಿಸೆಂದು ಹೇಳಿದರು. ಗುರುಗಳೆಂದರೆ ಹೆದರಿಕೆ ಆದರೂ, ದಾಸರ ವಚನದಲ್ಲಿ ಬ್ರಹ್ಮರಾಕ್ಷಸನಿಗೂ ವಿಶ್ವಾಸ. ಮಾರನೇ ದಿನ ಶ್ರೀಗಳವರು ಬಹಿರ್ಭೂಮಿಗೆ ಹೋಗಿ ಬರುವಾಗ್ಗೆ ಸ್ವಾಮಿಗಳವರನ್ನು ಆರ್ತತೆಯಿಂದ ಪ್ರಾರ್ಥಿಸಿತು. ದಾಸಪ್ಪನವರೆ ಇದೆಲ್ಲ ನಿಮ್ಮ ಸೂಚನೆಯನ್ನಲು; ದಾಸರು ಉದ್ಧಾರ ಮಾಡಲು ಪ್ರಾರ್ಥಿಸಿದರು. ಶ್ರೀಗಳವರು ಸ್ನಾನ ಮಾಡಿ ಒಂದು ದಿನ ಆಹನ್ಹೇ ಪುಣ್ಯವನ್ನಿತ್ತು ಮಂತ್ರೋ

ದಕ ಪ್ರೋಕ್ಷಿಸಿದರು. ಆ ಕ್ಷಣವೇ ಆ ಬ್ರಹ್ಮರಾಕ್ಷಸ ದೇಹ ದಗ್ದವಾದಿತು. ಆ ಕೆಟ್ಟ ಜನ್ಮ ನಿವೃತ್ತವಾಯಿತು. ಮುಂದೆ ಜನ್ಮಾಂತರದಲ್ಲಿ ಉತ್ತಮ ಸಾಧನವಾದಿತು. ಮತ್ತು ಶ್ರೀ ದಾಸಪ್ಪದಾಸರು ಶ್ರೀಗಳವರಿಗೆ ಭಕ್ತಿಯಿಂದ ತಾವು ಪುಣ್ಯ ಲೋಭಿಗಳೆಂದರು.

## ಗದ್ವಾಲ ರಾಜನಿಗೆ ಆಪತ್ತು ಪರಿಹಾರ

ಗದ್ವಾಲ ರಾಜನು ಕೆಲ ದಿನದಿಂದ ನವಾಬನಿಗೆ ಕೊಡತಕ್ಕ ದ್ರವ್ಯ ಕಾಣಿಕೆ ಮುಟ್ಟಿಸಲಿಲ್ಲ. ಇನ್ನು ಅನೇಕ ರೀತಿಯಿಂದ ರಾಜರಮೇಲಿ ದೂರು ಕೇಳಿ ಆ ಗದ್ವಾಲಿ ಸಂಸ್ಥಾನವೇ ವಶಮಾಡುವದೆಂದು ಸೈನಾಧಿಪತಿಗೆ ನವಾಬ ಆಜ್ಞಾಪಿಸಿದ. ಸೇನೆಯು ನದಿಯ ಆಚೆಯ ದಂಡೆಗೆ ಬಂದಿಳಿಯಿತು. ರಾಜರಿಗೆ ಬಹುಚಿಂತೆ ದಿಗ್ಭ್ರಾಂತನಾಗಿ ಶ್ರೀಗಳವರಲ್ಲಿ ಪ್ರಾರ್ಥಿಸಲು. " ಧರ್ಮೋಭವತು ಸಧ್ಧರ್ಮಃ ಮಾರ್ಗಣಾಃ ಸಂತು ಮಾರ್ಗಣಾಃ ॥ ವಾಹಿನೀ ವಾಹಿನಿ ರಾಜನ್ ಸ್ಯಾದರಾತಿ ಪರಾಜಯಃ ॥ ಎಂಬ ಶ್ಲೋಕವನ್ನು ಬರೆದು ಕಳುಹಿದರು. ಶ್ರೀಗಳವರ ಆಜ್ಞೆಯಂತೆ ಪೂಜಿಸಿ ಆ ಪತ್ರ ಪಲ್ಲಕ್ಕಿ ಯಲ್ಲಿಟ್ಟುಕೊಂಡು ಹೋಗಿ ಕೃಷ್ಣವೇಣಿ ಪೂಜಾ ಮಾಡಿ ಆ ಪತ್ರ ಸಹಿತ ಕೃಷ್ಣಾದಲ್ಲಿ ತೆಪ್ಪ ಬಿಟ್ಟರು. ವೈಶಾಖಮಾಸ ಬೇಸಿಗೆ ಕಾಲ ನದೀ ಪ್ರವಾಹ ಬಂದು ಶತ್ರುಸೈನ್ಯ ನಾಶವಾದಿತು. ರಾಜನು ಹರ್ಷಿತನಾದನು. ಸುಮಾರು ೨॥ ೩ ಸಾವಿರ ಆದಾಯವುಳ್ಳ ಎಕಲಾಸಪುರವನ್ನು ಜಹಗೀರ ಹಾಕಿ ಕೊಟ್ಟನು.

## ಬಡಿಗೆಣ್ಣನಿಂದ ತಮ್ಮ ಕಾಲ ಬೆರಳು ತಗಸಿದ್ದು

ಶ್ರೀಗಳವರು ಪೂರ್ವಜನ್ಮದಲ್ಲಿ ತಾವು ಒಂದು ಸಲ ನಿಷ್ಟುರವಾಡಿದ ಒಬ್ಬನ ಕಾಲು ಬೆರಳು ಕಡಿಸಿದ್ದರಂತೆ. ಆ ಪ್ರಾರಬ್ಧದಿಂದ ಕಾಲುಬೆರಳಿಗೆ ವ್ರಣವು ಉಂಟಾಗಿ ಕಾಲಿಗೆ ನೋವಾಗಿದೆ. ಅಲ್ಲಿದ್ದ ಬಡಿಗೇರವರವನನು ಕರೆಸಿ ಕಾಲಿನ ನೋವು ಅಪರಿಹಾರ್ಯವಾಗಿದೆ. ಕಡಿದುಬಿಡು ನಾವು ಹಿಂದೊಂದು ಜನ್ಮದಲ್ಲಿ ಹೀಗೆ ಮಾಡಿದ್ದೆವು ಎಂದು ಹೇಳಲಾಗಿ ಬಡಿಗನು ಕಾಲು ಬೆರಳು ಕತ್ತರಿಸಿದನು ವ್ರಣವೂ ಹೋಯಿತು ಕಾಲುಬಾಧೆ ಗುಣ ವಾದಿತು. ಮುಂದೆ ಬರುವ ಜನ್ಮಾಂತರ ಪ್ರಾರಬ್ಧವನ್ನು ಈಗಿನ ಜನುಮು

ದಲ್ಲೇ ತ್ರಿಕಾಲಜ್ಞರಾದ ಜ್ಞಾನಿಗಳು ಅನುಭವಿಸಿ ನೀಗಿದರು. ಆಗಿನ ವ್ಯಾಖ್ಯ ಶ್ರೀ ಹರಿಯ ಸ್ತೋತ್ರ "ಕಾಲಿನ ಬಾಧಿಯು ತಾಳರೆ" ಎಂದು ಒಂದು ಪದ ರಚಿಸಿದ್ದಾರೆ.

ಮತ್ತು ಶ್ರೀ ಗುರುಗಳಾದ ಶ್ರೀಭುವನೇಂದ್ರರ ವೃಂದಾವನ ಸ್ಥಾಪಿಸಲು ಕಮಲದ ಕಟ್ಟೆ, ಪರರಿಂದ ರಾಜನ ಸಹಾಯದೊಡನೆ ವಶಪಡಿಸಿ ರಾಜೋಳಿ ಯಲ್ಲಿ ಅಲ್ಲೆ ವೃಂದಾವನ ಸ್ಥಾಪಿಸಿ ಪೂಜಿಸಿದ್ದಾರೆ. ಇವರ ಪರಮ ಶಿಷ್ಯ ರಾದ ಶ್ರೀ ಸುಭೋಂದ್ರರಿಗೆ ಸಂಸ್ಥಾನ ಪ್ರಾಪ್ತಿ ವಿಷಯದಲ್ಲಿ ಕಲಹವನ್ನೂ ಪರಿಹರಿಸಿ ಅನೇಕ ಮಹಿಮೆ ತೋರಿದ ಮಹಾತ್ಮರಿವರು ಇವರು ಪವನಸಖ ರೆಂದು ಶ್ರೀ ಜಗನ್ನಾಥದಾಸರು ತುಂಬಾ ಹೊಗಳಿದ್ದಾರೆ. ಕೃಷ್ಣ ಬಂದಾಗ್ಗೆ "ನಂದವ್ರಜ ದ್ವಾರಕಾಪುರಿ ಬಿಟ್ಟು ಬಂದದ್ದೆ. ಬಹು ಲಾಭವೊ" ಮುಂತಾದ ಅನೇಕ ಪದಗಳನ್ನು ರಚಿಸಿದ್ದಾರೆ.

ಇವರ ಕೃತಿ ಮತ್ತು ಶ್ರೀ ವರದಗೋಪಾಲದಾಸರ ಕೃತಿಗಳು ಬಹು ಅಂತರಂಗ ಭಕ್ತಿ ರಸಭರಿತವಾದವು ಗೂಢ ಸಾಂಕೇತಿಕವಾದವು "ಅಕ್ಕಾ ಎನ್ನಯ ಸ್ಥಿತಿ ಆರಿಗೆ ಪೇಳಲ" "ಎದೆ ಹಾರುತಿದೆ ಹುಡುಗಿಯು ನಾನು" ಇತ್ಯಾದಿ ಅನೇಕ ರಹಸ್ಯ ಭಾವಗರ್ಭಿತವಿದೆ. ಅರ್ಥವಾಗುವಂತಿಲ್ಲ. ಇವರ ಕಾವ್ಯಭಾಷಾಶೈಲಿ ಲೋಕೋಪಕಾರ ಗ್ರಂಥವಿಚಾರ ವಿಶದವಾಗಿ ಹರಿದಾಸ ಸಾಹಿತ್ಯದಲ್ಲಿ ಮುಂದೆ ಮಾಡುವ ಇವರು ದೇವಾಂಶರೆಂಬುದು ಶ್ರೀ ಗೋಪಾ ಲದಾಸರೆ ಹೇಳಿದ್ದಾರೆ. "ಕಂಡೆ ಕರುಣೆಗಳೊಳ ಗಗ್ರೇಶರಾದ ಪಂಡಿ ರಾಮಾರ್ಯರ" ಎಂಬ ಪದ ೩ ನೇ ನುಡಿಯಲ್ಲಿ "ಇವರ ಅನುಭೋಗವು ಇರತೋರಿ ತಮ್ಮ ನಿಜ ಕುರುಹು ನೋಡೆಂದು ಚಪ್ಪರಿಸಿ ಬಿಗಿದಪ್ಪಿದ ॥ ೨ ॥

ಏಸು ಜನ್ಮದ ಸುಕೃತ ಎನಗಿವರಕರುಣ ಉಪದೇಶ ಸ್ವಪ್ನದಿ ಆದುದಾ ಕೇಶವನೆ ಈ ರೂಪದಿ ಬಂದು ಪೇಳ್ದನೆ ಹ್ಯಾಗೊ ಲೇಶನಾ ಅರಿ ದನಲ್ಲ ॥ ದಾಸಗುರು ವಿಜಯರಾಯರೆ ಇಲ್ಲಿ ನಿಂದೆನ್ನ ಪೋಷಿಸುವ ಬಗೆಯು ಹ್ಯಾಗೊ" ಇತ್ಯಾದಿ ಸ್ತೋತ್ರವು ತಮಗಿಂತಲೂ ಉತ್ತಮರಾದವರಿವರು. (ಅಗ್ನ್ಯಾಂಶರು) ಕುರುಹು ತೋರಿದರೆಂದು ಹೇಳಿದ್ದಾರೆ. ಅಲ್ಲದೇ ಇವರ ಸ್ತೋತ್ರ ಪದಗಳನ್ನೋದಿ ಅವರ ಚರಿತ್ರೆ ವಿಶೇಷವಾಗಿ ತಿಳಿಯಬಹುದಾಗಿದೆ.

ಹೀಗೆ ಅನೇಕ ಮಹಿಮೆಗಳನ್ನು ತೋರಿ "ತೆರಳಿದರು ವ್ಯಾಸ ತತ್ವ ಜ್ಞರಂದು ಪುರುಷೋತ್ತಮನ ಗುಣಗಳರುಪಿ ಸುಜನರಿಗೆ ಈ ಪದ (೧) ನುಡಿ "ವರರೌದ್ರಿನಾಮ ಸಂವತ್ಸರ ಶ್ರಾವಣ ಪರಪಕ್ಷ ಅಷ್ಟಮಿ ಚೌಕುವಾರ ಭರಣೀ ನಕ್ಷತ್ರ ಪ್ರಾತಃಕಾಲದಲಿ ಸೋಮಪುರದಿ ಗೋಪಾಲ ಕೃಷ್ಣನ ಪಾದ ಸನ್ನಿಧಿಗೆ|| ಎಂದು ಹೇಳಿದಂತೆ ಸಜ್ಜನರನ್ನು ಉದ್ಧಾರಮಾಡಿ ಪರಲೋಕಯಾತ್ರೆಗೈದರೆಂದು ಶ್ರೀ ಜಗನ್ನಾಥದಾಸರೆ ಹೊಗಳಿದ್ದಾರೆ.

ಮೇಲೆ ವಿವರಿಸಿದ ಮಹಿಮೆಗಳಲ್ಲದೆ ಇನ್ನು ಅಪಾರ ಮಹಿಮೆ ಅವರ ಕೃತಿಗಳಿಂದಲೇ ತಿಳಿಯುತ್ತದೆ. ಕಾಲದೇಶವೂ ಬೇಕು. ವಿಶಾಲ ದೃಷ್ಟಿಯಿಂದ ಮನ ಮುಟ್ಟಿ ಶೋಧಿಸಲು ಅವರ ಮಹಾಮಹತ್ಮೆ ರಸನಾಮೃತವು ಒದಗಲು ಸಂದೇಹವಿಲ್ಲ. ಇವರ ಮಹಿಮೆ ಅಪಾರವಾದದು.

ನನ್ನಂಥ ಪಾಮರನಿಂದ ತಿಳಿಯಲೂ ಶಕ್ಯವಿಲ್ಲ. ಮೊದಲ ಪ್ರಾರ್ಥನೆ ಯಂತೆ ಗುರುಗಳು ಪ್ರೇರಿಸಿ ಬರೆದಂತೆ ಕಿಂಚಿತ್ತು ಬರೆದು- ಅವರ ಅನುಗ್ರಹವು ಹೊರ್ತಾಗಿ ಬೇರೊಂದಿಲ್ಲ. ಮಹಾತ್ಮರಲ್ಲಿ ಭಕ್ತಿಮಾಡಿ ಅವರನ್ನು ಹೊಗಳುವದೇ ಮುಖ್ಯ ಮುಂದಿನ ಸಾಧನ ಸೋಪಾನ. ಈ ಮಹಾತ್ಮ ರನ್ನು ಕಂಡವನೇ ಧನ್ಯ, ಅವರಿಂದ ಶ್ರವಣ ಮಾಡಿದವನೇ ಮಾನ್ಯ, ಉಪ ದೇಶ ಪಡದವನೇ ಪುಣ್ಯಾತ್ಮ. ಈ ಕಾಲ ಪರಿಸ್ಥಿತಿಯಲ್ಲಿ ಇಂಥವರ ಚರಿತ್ರೆ ರೂಪ ಕಥೆ ಕೇಳುವವನು ಸಹ ಧನ್ಯ, ಮಾನ್ಯ ಪುಣ್ಯಾತ್ಮನೆಂದು ಬಿನ್ನೈಸಿ; ಅಸ್ಮದ್ಗುರುಗಳಂತರ್ಯಾಮಿ ಮಧ್ವೇಶನು ಪ್ರೀತನಾಗಲಿ. ಈ ಮಹಾತ್ಮರ ಕೃತಿಗಳನ್ನು ಕಥೆಯನ್ನು ಸಜ್ಜನರು ಓದಿ ಮನನ ಮಾಡಿದರೆ ನಮ್ಮ ಕಾರ್ಯ ಸಫಲವೆಂದು ಬಿನ್ನೈಸುವೆನು.

ಹರಿ ದಾಸರ ದಾಸರ ದಾಸ,

೧—೧೨—೫೭

ಹನುಮಂತರಾವ ಗೊರಾಬಾಳ

ಸಂಚಾಲಕ ಮಂಡಲ.

# ಶ್ರೀ ವೆಂಕಟರಾಮಾಚಾರ್ಯರು ಶ್ರೀ ವಾಸುದೇವ ವಿಠಲರ ವಂಶ ವೃಕ್ಷ




ಅಣ್ಣಯ್ಯಾಚಾರ್ಯರಿಗೆ— ೧. ಹಯವದನಾಚಾರ್ಯರು ೨. ಶ್ರೀನಿವಾಸಾಚಾರ್ಯರು ಉಭಯರು ಇದ್ದಾರೆ (೩) ಮನೆತನಗಳಿವೆ.

॥ ಶ್ರೀ ॥

## ಪದ–ಸುಳಾದಿ ಉಗಾಭೋಗಗಳ

# .... ಅಕ್ಷರಾನುಕ್ರಮಣಿಕೆ ....


| ಪದ, ಸು. ನಂಬರ | | ವಿವರ | ಪುಟ |
|---|---|---|---|
| | | ಅ | |
| ಪದ | ೧೫— | ಅಂಜಿಸುವದ್ಯಾಕಮ್ಮ ಕಂಜೋದ್ಭವನಮ್ಮಾ | ೪೬ |
| ಸು. | ೨— | ಅಕ್ಕ ಎನ್ನಯ ಸ್ಥಿತಿ ಕೇಳೆ ಆರಿಗೆ ಪೇಳೆ | ೯ |
| ಪದ | ೪೦— | ಅನಂತಾನಂತ ಪಾಪ ಮಾಡುವೆ ನಾನು | ೬೪ |
| ಸು. | ೩— | ಅನೇಕ ಶಕುತಿಯುಳ್ಳವನೆಂದು | ೧೦ |
| ಪದ | ೪೭— | ಅಪರಾಧ ಎನ್ನದೈಯ್ಯ ಅಪರಿಮಿತವೆ ಸರಿ | ೬೭ |
| ಪದ | ೨೪— | ಅಳಬ್ಯಾಡಲೆಮ್ಮೊ ರಂಗಮ್ಮ ನಿನ್ನ | ೫೨ |
| | | ಆ | |
| ಪದ | ೧೧— | ಆನಂದತೀರ್ಥರ ಮತ ಪರಮ | ೪೪ |
| ಪದ | ೫೨— | ಆರಗೊಡವೆ ನಿನಗ್ಯಾಕೆಲೊ ವೀರ ಶ್ರೀ | ೮೧ |
| ಪದ | ೫೬— | ಆರಿಗ್ಯಾತಕೆ ಮೊರೆ ಇಡಲಿ ಸಾರಿದವರನು | ೮೪ |
| ಸು. | ೪— | ಆರಿಗೆ ಉಸಿರಲಿ ಆರಿಗೆ ಮೊರೆ ಇಡಲಿ | ೧೨ |
| ಪದ | ೮೧— | ಆವ ಜನುಮದ ಸುಕೃತ ಒದಗಿತೆನಗೆ | ೯೩ |
| | | ಇ | |
| ಪದ | ೪೯— | ಇದನೆ ಬೇಡುವೆನಯ್ಯಾ ಒದಗಿ ಪಾಲಿಸೊ | ೬೯ |
| ಪದ | ೨೬— | ಇವಗಳ ಹಾವಳಿಗಂಜುವಳಲ್ಲ | ೫೬ |
| | | ಈ | |
| ಪದ | ೪೩— | ಈ ಭವವೆ ನಮಗೆ ಸಫಲ ಕಾಣಿರೊ | ೬೬ |

| ಪದ, ಸು. ನಂಬರ | | ವಿವರ | ಪುಟ |
|---|---|---|---|
| | | **ಉ** | |
| ಪದ | ೬೫— | ಉದ್ಧರಿಸೊ ಮಹರಾಯ ಉದಧಿಶಯನ | ೭೯ |
| ಪದ | ೫೦— | ಉಸಿರಬಹುದೆನಗೆ ಕೃಷ್ಣ ಬಾಗಿಲ | ೭೦ |
| | | **ಎ** | |
| ಪದ | ೩೭— | ಎಂತು ರಕ್ಷಿಪೆ ಎನಗಾಂತು ಶಿಕ್ಷಕರಿಲ್ಲ | ೬೨ |
| ಉ. | ೧೦— | ಎಂದಿಗೆ ಕಾಂಬೆ ನಾ ಬೆಳಗು ಮುಂದಿನ್ನು | ೬ |
| ಸು. | ೧೪— | ಎಂದಿಗೆ ದುರ್ವಿಷಯ ಹೇಯತಿಮತಿ | ೩೦ |
| ಸು. | ೧೯— | ಎಂದಿಗೆ ನಿನ್ನ ಪಾದ ಕಾಂಬೆ ಎಂದಿಗೆ ನಿನ್ನ | ೪೯ |
| ಪದ | ೩೮— | ಎನ್ನನುದ್ಧರಿಸಲು ಘನ್ನ ಬಿರಿದುಗಳು | ೬೩ |
| ಪದ | ೨೫— | ಎನ್ನ ಬಿನ್ನಪ ಸಖಿ ಚನ್ನಾಗಿ ತಿಳಿಸೆ ಚನ್ನಿಗ | ೫೩ |
| ಪದ | ೪೪— | ಎನ್ನಾಗವು ಹೀಗಾಯಿತೋ ದೇವ | ೬೬ |
| | | **ಏ** | |
| ಪದ | ೨೯— | ಏನು ಗತಿ ಎನಗಿನ್ನು ಏನು ಗತಿಯೊ | ೫೭ |
| ಪದ | ೩೯— | ಏನು ದಾಸಾ ನಾನು ಹರಿಯೆ ನೀನು | ೬೩ |
| ಪದ | ೭೫— | ಏಸು ಜನುಮದ ಸುಕೃತ ಫಲವೊ | ೮೮ |
| ಪದ | ೯೦— | ಏಸು ಜನ್ಮದ ಸುಕೃತ ಫಲಿಸಿತೆನಗೆ | ೯೮ |
| ಪದ | ೭೮— | ಏಸು ಜ್ಞಾನಿಗಳಿನ್ನು ಇವರ ಸರಿಯೇ | ೯೧ |
| | | **ಒ** | |
| ಸು. | ೬— | ಒಲ್ಲೆ ವಿಷಯಗಳೆಂದವರಿಗೆ | ೧೬ |
| | | **ಕ** | |
| ಪದ | ೮೫— | ಕಂಡೆ ಕಂಗಳ ದಣಿಯಲಿಂದ | ೯೬ |
| ಪದ | ೬೭— | ಕಂಡೆ ಕರುಣಿಗಳೊಳಗೆ ಅಗ್ರೇಸರಾದ | ೮೧ |
| ಪದ | ೮೨— | ಕೃತಕೃತ್ಯನಾದೆನಿಂದಿನ ದಿನದೊಳು | ೯೩ |
| ಪದ | ೭೪— | ಕರುಣಿಗಳೊಳಗತಿ ಕರುಣಿ ರಾಮಾರ್ಯರ | ೮೮ |

| ಪದ, ಸು. ನಂಬರ | | ವಿವರ | ಪುಟ |
|---|---|---|---|
| ಪದ | ೫೯— | ಕಾಯೊ ಕಾಯೊ ಕಾಮಿತ ಫಲದ | ೭೬ |
| ಪದ | ೯೫— | ಕಾರುಣ್ಯನಿಧಿ ಎನ್ನ ಕಾಪಾಡು ಕೈವಿಡಿದು | ೧೦೩ |
| ಪದ | ೨೩— | ಕೆಳದಿ ಕೇಳುವ ಬಾರೆ ನಳಿನಾಕ್ಷ ವನದಲ್ಲಿ | ೬೧ |
| ಉ. | ೩— | ಕೌತುಕ ನೋಡಬೇಕೆಂಬುವದೆ ನಿನಗಿತ್ತೆ | ೨ |

ಖ

| | | | |
|---|---|---|---|
| ಸು. | ೧೩— | ಖಳಕುಲ ಮರ್ದನ ದೇವನೆ ಇಳಿಯ | ೨೯ |

ಗ

| | | | |
|---|---|---|---|
| ಪದ | ೧— | ಗುಣಗಳ ಕರುಣಾನಿದು ಇರುಳುಹಗಲು | ೩೬ |
| ಪದ | ೨೨— | ಗೋಪ ಸತಿಯರೆಲ್ಲ ಕೇಳಿರೆನ್ನಯ ಮಾತ | ೫೦ |

ಘ

| | | | |
|---|---|---|---|
| ಉ. | ೮— | ಘನ್ನ ಕರುಣಿ ಗೋಪಾಲ ಬಾಲ ಚಿನ್ನ ವತ್ಸನು | ೫ |

ಚ

| | | | |
|---|---|---|---|
| ಪದ | ೪೧— | ಚರಣವೆಂಬ ದುರ್ಗವು ದುರ್ಗವ ಸೇರಿದೆ | ೬೪ |

ಜ

| | | | |
|---|---|---|---|
| ಪದ | ೭— | ಜಯ ಮುನಿಯ ಭಜಿಸಿ ಸಿರಿಪತಿಯ | ೪೧ |

ತ

| | | | |
|---|---|---|---|
| ಉ. | ೫— | ತಂಗಿ ನೋಡುವ ಬಾರೆ ಎನ್ನ ಮನೆಯೊಳ | ೩ |
| ಪದ | ೨೮— | ತಮ್ಮಾ ಕೇಳಿದ್ಯಾ ಪರ ಬೊಮ್ಮ ನೀನೆಂತೊ | ೫೫ |
| ಪದ | ೧೦— | ತಾವಲ್ಲಿ ನೆನೆಯಲು ದಶಮತಿ ಗುರುಗಳು | ೪೩ |
| ಪದ | ೬೦— | ತಿಳುಪಿದೆನೊ ಪರಮ ದಯದಿಂದ | ೭೬ |
| ಪದ | ೮೩— | ತೆರಳಿದರು ವ್ಯಾಸ ತತ್ವಜ್ಞ ಮುನಿಪಾ | ೯೪ |
| ಪದ | ೭೯— | ತೆರಳಿದರು ಶ್ರೀಹರಿಯ ಪುರಕೆ | ೯೨ |
| ಪದ | ೨೭— | ತೋರೆಲೆ ಪ್ರಾಣಕಾಂತನ ಎನ್ನ | ೫೫ |

| ಪದ, ಸು. ನಂಬರ | ವಿವರ | ಪುಟ |
|---|---|---|
| | **ದ** | |
| ಶ್ಲೋಕ ೬೬— | ದಿಕ್ ಪ್ರಾಂತಾ ತತ ಪುಣ್ಯ ಕೀರ್ತಿ | ೩೧ |
| ಪದ ೬೯— | ದಾಸ ಪುರಂದರನ ದಯುಕೆ ಪಾತುರರಾದ | ೮೮ |
| ಪದ ೮— | ದೇವತೆಗಳ ದೇವ ಮಹದೇವ ದೇವ | ೪೨ |
| ಪದ ೫೪— | ದೇವ ನಿನ್ನುಪಕಾರ ಅಪಾರ ಮಾಡಿದೆ | ೭೨ |
| | **ನ** | |
| ಸು. ೭— | ನಂಬಿದವಳೀ ಪರಿ ಮಾಡಿದರೆ ಮುಂದೆ | ೧೮ |
| ಪದ ೨೦— | ನಂಬೋದೆ ಖರಿಯಾ ಶ್ರೀಹರಿಯು ಪಾದ | ೪೯ |
| ಪದ ೬೪— | ನಮುಗ್ಯಾಂಗ ಶ್ರೀಹರಿ ದಯ ಮಾಡ್ಯಾನು | ೭೯ |
| ಪದ ೩೦— | ನರಸಿಂಹ ನರಸಿಂಹ ನಮಿಸುವೆನು ಘೋರ | ೫೭ |
| ಪದ ೩— | ನಾನ್ಯಾಕೆ ಚಿಂತಿಸಲಿ ನಾನ್ಯಾಕೆ ಧೇನಿಸಲಿ | ೩೮ |
| ಪದ ೫೭— | ನಾಲಿಗೆ ತುದಿಯಲ್ಲಿ ರಾಮ ಎಂಬೊ ನಾಮ | ೭೫ |
| ಪದ ೪೨— | ನಿನಗಿಂತ ಮಿಗಿಲಾದ ಕರುಣ ನಿನ್ನದಿರೆ | ೬೫ |
| ಪದ ೬೩— | ನೀರೆ ನೀರಜ ನಯನನ ತೋರೆ | ೭೯ |
| ಪದ ೪೪— | ನಿನ್ನ ಮನ ಬಂದಂತೆ ವಿಹರಿಸೊ ಸಿರಿಕೃಷ್ಣ | ೬೬ |
| ಪದ ೯೪— | ನೋಡಿ ಧನ್ಯನಾದೆ ಗುರುಗಳ ನೋಡಿ | ೧೦೨ |
| ಪದ ೬— | ನೋಡು ನೋಡು ಟೀಕಾಚಾರ್ಯರ | ೪೧ |
| | **ಪ** | |
| ಪದ ೭೩— | ಪಂಕಜಾಕ್ಷಿ ಕೇಳಿದ್ಯಾ ಪಂಕಜ ಗಂಧಿ | ೮೬ |
| ಪದ ೩೪— | ಪಕ್ಕಿವಾಹನ ದಯಸಿಂಧು ನೀ ಎನ್ನ ಚಿಕ್ಕ | ೬೦ |
| ಉ. ೭— | ಪರಮ ಪಾವನ ಮೂರ್ತಿ ಹರಿಯೆ ನೀನಯ್ಯಾ | ೪ |
| ಉ. ೪— | ಪರಮ ಭಕುತಿ ಪಾಶ ಚರಣಕ್ಕ ತಳೆ | ೨ |
| ಪದ ೧೪— | ಪರಿಪೂರ್ಣ ಕಾಮೆ ಶ್ರೀರಮೆ ಕಮಲ | ೪೬ |
| ಪದ ೯— | ಪ್ರಾಣನಾಥನೆ ನಿನ್ನ ತುತಿಯು ಮಾಡಲು | ೪೨ |
| ಪದ ೭೧— | ಪೂರ್ವಜನ್ಮದ ಪುಣ್ಯ ಫಲವೊ | ೮೫ |
| ಪದ ೬೮— | ಪೇಳಬಹುದೊಬ್ಬರಿಗೆ ವ್ಯಾಸನೆ | ೬೮ |

| ಪದ, ಸು. ನಂಬರ | | ವಿವರ | ಪುಟ |
|---|---|---|---|


| ಪದ | ೭೪— | ಪೊಗಳಲೊಶವೆ ಪುಣ್ಯಚರಿತನಾ | ೮೬ |
|---|---|---|---|
| ಪದ | ೯೩— | ಪೊಗಳಲೊಶವಲ್ಲ ಎನಗಿವರ ಮಹಿಮೆ | ೧೦೦ |
| | | **ಬ** | |
| ಪದ | ೩೧— | ಬಂದಾ ಕೃಷ್ಣ ಛಂದದಿಂದ ಬಂದ ನೋಡೆ | ೫೦ |
| ಪದ | ೫೪— | ಬಡವನ ಮನೋರಥ ಪೂರೈಸೊ ಸಿರಿಕೃಷ್ಣ | ೭೧ |
| ಸು. | ೧೦— | ಬಾರದ ಮೊದಲಿನ್ನು ವಿಷಯು ಬಾರದ | ೩೪ |
| ಪದ | ೧೬— | ಬಾರೋ ಬಾರೋ ಹರಿಯು ತೋರೊ ತೋರೊ | ೪೭ |
| ಪದ | ೧೭— | ಬಾರೋ ಬಾರೋ ಸುಂದರನೆ ಬರಹೇಳಿ | ೪೮ |
| ಪದ | ೧೮— | ಬಾರೋ ಬಾರೋ ಪ್ರಾಣಕಾಂತ ತೋರೊ | ೪೮ |
| ಸು. | ೧೨— | ಬಿನ್ನಪ ಮಾಡುವೆ ಯಜ್ಞ ಶ್ರೀನಿವಾಸ | ೩೬ |
| ಪದ | ೬೧— | ಬೋಧಕರಾರೆಲೊ ಲೋಕದಿ ದಾಸರಿಗೆ | ೭೭ |
| | | **ಮ** | |
| ಉ. | ೪— | ಮನ ಮನೋಭವನ ಪಿತನ ನೆನೆದನು | ೪ |
| ಪದ | ೧೩— | ಮನವೇ ಮಾನ್ಯನ ಮನ್ನಿಸು ಶ್ರೀವ್ಯಾಸ | ೪೫ |
| ಪದ | ೪೩— | ಮನಸಿಗೆ ಬಂದ ಧನ್ವಂತರಿ ವೈದ್ಯನೆ | ೫೯ |
| ಪದ | ೪— | ಮರವರೆ ಎನ್ನ ರಾಘವೇಂದ್ರ ಗುರುವೆ | ೪೯ |
| ಪದ | ೪೫— | ಮರೆಯು ಮಾಡುವರೆ ರಂಗಯ್ಯ ಥರೆ | ೬೧ |
| ಪದ | ೮೭— | ಮೃಗರಾಜ ಕಟಿ ಮೃಗನ ತೋರೋ | ೯೬ |
| ಪದ | ೭೦— | ಮಾನುನೀ ಈ ಮಹತ್ಕ ದ್ವಿಜರೆ | ೮೫ |
| ಸು. | ೧೫— | ಮೂರೆರಡು ಭೂತಂಗಳ ಸ್ವರೂಪ ತಿಳಿವದು | ೪೪ |
| | | **ಯ** | |
| ಪದ | ೯೧— | ಯತಿವರ ವ್ಯಾಸ ತತ್ವಜ್ಞರ ಪಾದಸತತ | ೯೯ |
| ಪದ | ೫೮— | ಯಾತರವ ನಾನಲ್ಲವೋ ಹರಿ ಬರಿದೆ ಖ್ಯಾತಿ | ೫೭ |
| | | **ರ** | |
| ಪದ | ೮೬— | ರಾಜಮಣಿ ಗುರುರಾಜ ಮಣಿ | ೯೬ |
| ಪದ | ೮೦— | ರಾಮಾರ್ಯ ನಿಮ್ಮಂಘ್ರಿ ಕಮಲಗಳಿಗೆ | ೯೩ |

| ಪದ, ಸು. ನಂಬರ | | ವಿವರ | ಪುಟ |
|---|---|---|---|
| | | **ಲ** | |
| ಪದ | ೮೪— | ಲೇಸು ಪಾಲಿಸು ಎನಗೆ ಭಾಷೆ ಪಾಲಕಾ | ೯೫ |
| | | **ವ** | |
| ಪದ | ೮೮— | ವೃಂದಾವನದಿ ವಿರಾಜಿಪ ಯತಿವರನ್ಯಾರೆ | ೯೭ |
| ಪದ | ೭೬— | ವ್ಯಾಸತತ್ವಜ್ಞರಿಗೆ ಮಂಗಳಂ | ೮೯ |
| ಪದ | ೬೮— | ವ್ಯಾಸರಾಯರು ನಿತ್ಯ ಶ್ರೀ ಶಾರ್ಙತೋದನ | ೮೩ |
| ಪದ | ೫೫— | ವಿನಯದಲಿ ವಿಜ್ಞಾಪನವ ಮಾಡುವೆ | ೭೨ |
| ಪದ | ೮೯— | ವೇಣಾನೂದುತ ನಿಂತಿಹನಾರೆ ಪೇಳಮ್ಮಯ್ಯಾ | ೯೭ |
| | | **ಶ** | |
| ಪದ | ೨೧— | ಶರಣಾಗ್ರಣಿ ರಾಮ ಚರಣಾಂಬುಜ ಬಿಡೆ | ೬೮ |
| ಸು. | ೮— | ಶ್ರೀ ನಾರಸಿಂಹ ದೇವ ನೀನೆ ಸಾರ ಹೃದಯ | ೩೦ |
| ಪದ | ೩— | ಶ್ರೀ ರಾಘವೇಂದ್ರ ತವ ಚರಣಂ ಭಜಾಮಿ | ೨೬ |
| ಪದ | ೯೨— | ಶ್ರೀ ವ್ಯಾಸತತ್ವಜ್ಞರೆಂಬ ಮಹಾ ದೇಶಿಕಾ | ೧೦೧ |
| | | **ಸ** | |
| ಉ. | ೯— | ಸಂಸ್ಕೃತಿ ತೆರೆಯಲ್ಲಿ ಬಿದ್ದು ಮುಳುಗುವೆ | ೫ |
| ಪದ | ೬೩— | ಸಣ್ಣವನ ಬಿನ್ನಪ ಸಲಿಸಬಹುದೈಯ್ಯ | ೭೮ |
| ಪದ | ೫— | ಸರಿಯಾರೈ ಮುನಿ ಸಮರ್ಯಾರೈ | ೪೦ |
| ಪದ | ೧೨— | ಸಿರಿದೇವಿ ಹರಿ ದಯವು ಆವಾವ ಪರಿ | ೪೫ |
| ಉ. | ೨— | ಸಿರಿ ಬೊಮ್ಮಾದಿಗಳೊಡೆಯ ನೀನು ಎನ್ನ | ೩ |
| ಸು. | ೧೩— | ಸಿರಿಯ ಪತಿಯ ನೀನು ಅಜನ ಪಿತನೊ | ೩೭ |
| ಪದ | ೪೨— | ಸಿಲುಕಿದೆನು ಭವ ಪಾಶದಲಿ ಹರಿಯೆ | ೬೫ |
| ಉ. | ೧— | ಸುರರನುಳಿಸಬಲ್ಲಿ ದುರುಳರಳಿಸಬಲ್ಲಿ | ೧ |
| ಸು. | ೫— | ಸೃತಿ ವಾರುಧಿಯೊಳಗೆ ಶಳವಿಗೆ ಪೋಗುವಗೆ | ೧೪ |
| ಪದ | ೭೭— | ಸ್ಮರಿಸುವೆ ಗುರುಗಳ ಸ್ಮರಿಸುವೆ | ೮೯ |
| ಪದ | ೨೬— | ಸೃಷ್ಟಿಕಾರಣ ದಯಾದೃಷ್ಟಿಲಿ ನೋಡೆನ್ನ | ೬೧ |

| ಪದ, ಸು ನಂಬರ | | ವಿವರ | ಪುಟ |
|---|---|---|---|
| | | **ಹ** | |
| ಸು. | ೯— | ಹರಿಯ ಆಜ್ಞೆಯಿಂದ ಈರೇಳು ಲೋಕವ | ೨೨ |
| ಸು. | ೧೬— | ಹಿರಿಯರು ಇಲ್ಲದ ಸ್ವರಣಿ ಏನಯ್ಯಾ | ೩೪ |
| ಪದ | ೩೩— | ಹುಚ್ಚುಗೊಳಿಸುವರೆ ಮುರಳಿ ತರುಳರ | ೬೦ |
| ಪದ | ೫೦— | ಹೇಳಲೂತಿ ಕೇಳಲೂತಿ ಏನಿಲ್ಲವೋ | ೭೦ |
| | | **ಜ್ಞ** | |
| ಉ. | ೬— | ಜ್ಞಾನಾವಲಂಬನದಿ ಎನಗಿಂದ ಕೃಷ್ಣಯ್ಯ | ೪ |


**ಸಂಜ್ಞೆ— ಉ.:— ಉಗಾಭೋಗ ಸು.:— ಸುಳಾದಿ**

(೧) ಗುರು ವಾಸುದೇವ ವಿಠಲರ ಸುಳಾದಿ (೨) ಪದ– ತಂದೆ ವಾಸುದೇವ ವಿಠಲರ ಪದ ಇದರಲ್ಲಿವೆ.

ಒಟ್ಟಿಗೆ ಪುಟಗಳು ೧೫೬. ಮೇಲ್ಭಾಗದಲ್ಲಿಯ ಒಟ್ಟು ಪುಟಗಳಿವೆ.



ಹರಿಃ ಓಂ

॥ ಶ್ರೀ ಲಕ್ಷ್ಮೀ ನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ ॥

ಶ್ರೀ ಗುರು ರಾಜೋವಿಜಯತೇ







ಪ್ರಕಟೀಕೃತ ಟೀಕೋಕ್ತಿಃ । ಮಕ-ಟೀಕೃತ ಮಾಯಿರಾಟ್ ॥

ಚಕ್ರಕಾತ್ ವ್ಯಾಸತತ್ವಜ್ಞ । ಮಸ್ಕರೀಂದ್ರೋ ಕೃಪಾಂಮಯಿ ॥ ೧ ॥

### ಶ್ರೀ ವ್ಯಾಸತತ್ವಜ್ಞರು (ಐಜಿಸ್ವಾಮಿಗಳು)

# ಶ್ರೀ ವಾಸುದೇವ ವಿಟ್ಠಲರ ಕೃತಿಗಳು.

## ಉಗಾಭೋಗಗಳು (೧)

ಸುರರನುಳಿಸಬಲ್ಲಿ ದುರುಳರಳಿಸಬಲ್ಲಿ ।
ಸಿರಿವಶಮಾಡಬಲ್ಲಿ ವೈದ್ಯರಾಜ ।
ಧೊರಿಯೆ ಧನ್ವಂತ್ರಿಯೇ ತರುಳನಾನೊಂದುಬೇಡವೆ ಬಲ್ಲಿಯಾ।
ಮರುಳು ಮಾಡುವ ಔಷುಧವ ।
ಹರಿನಿನ್ನ ಮೂರುತಿ ಕಾಮಧೇನು ತೋರಿ ।
ಸರಿವುತಿದೆ ಹೃದಯಗೋಷ್ಟದಿಂದ ।
ಕರುವು ಆದ ಮನ ಚಿಗದಾಡುತಲಿದೆ ।
ಕರದು ಕೊಂಬೆನೊ ನಾಇನ್ದ್ರಿಯಂಗೆ ಸುಧಿಯಾ ।
ಸ್ಥಿರದಯಪಾಶವ ಕೊರಳಲ್ಲಿ ಕೊಟ್ಟಟ್ಟಿ ।

ಪರಮ ಭಕುತಿಪಾಶ ಚರಣಕ್ಕೆ ತಳೆಹಾಕಿ ।
ಗುರುದಯರಸಬೆರತ ಪುಣ್ಯ ಮುರವನಿಕ್ಕಿ ।
ವರ ಲವಲವಿಕೆಯೆಂಬದಾವಿನಂದ ।
ಕರು ಕರವಶಮಾಡಿ ಉಣಿಸಿಕೊಂಡು ।
ತುರುವ ವಶಮಾಡಿ ಚಿತ್ತಪಾತ್ರಿಯಲ್ಲಿ ।
ಭರದಿ ಸುಧೆಯ ಕರದುಕೊಂಬಂತೆ ಮಾಡಯ್ಯಾ ।
ಮರುಳ ಮೆಚ್ಚುದಿಕರುವಿಗೆ ತುರುವಿಗೆ ।
ಸುರರಲ್ಲಿ ಈ ಪರಿಮಾಡಿದದನು ಬಲ್ಲೆ ।
ಕರೆದುದಷ್ಟು ಮೊಸಲು ಹಾಕುವೆ ನಿನಗೆ ।
ಸಿರಿವಾಸುದೇವ ವಿಠಲರೇಯ ।
ಮರಿಯಾದೆ ಮಾಡಯ್ಯಾ ಪರಮಪೂತನನೆ ॥೧॥

ಉಗಾಭೋಗ ೨

ಸಿರಿಬೊಮ್ಮಾದಿಗಳೊಡೆಯಾ ನೀನು ಎನ್ನ ।
ಹರಣದೊಡಿಯನೆಂದು ತುತಿಪೆನಯ್ಯಾ ।
ವೇದ ಮೊದಲಾದಾಗಮಕಾಗೋಚರನೆ ।
ತೊದಲು ನುಡಿಗಳಿಂದ ತುತಿಪೆನಯ್ಯಾ ವಿ ।
ವಿಧರಸಂಗಳಸುರರಿಗೆ ಸೇವಿಪಂಗೆ ಹವಿ ।
ರುದಕವನಿಟ್ಟು ಸಲಿಸೆಂಬೊನೊ ಬೊಮ್ಮ ।
ಮೊದಲಾದ ಭಕುತ-ಮುಕುಟಪಿರಿ ।
ಸುಮ್ಮಾನೆ ನಾನೊಬ್ಬ ಭಕುತಾನೆಂದೋಡುವೆ ।
ಈಸಪರಾಧವು ಸಹಿಸದೆ ಪೋವರೆ ।
ವಾಸುದೇವ ವಿಟ್ಠಲ ಎನಗಾವ ಗತಿಯೋ ॥ ೧ ॥

ಉಗಾಭೋಗ (೩)

ಕೌತುಕ ನೋಡಬೇಕೆಂಬುವದೆ ನಿನಗಿತ್ತ ।
ಭೂತಳವನುಬರಿದೆ ತಿರುಗಲ್ಯಾಕೆ ।
ಅತಿಚಿತ್ರನಿನಗೊಂದು ಪೇಳುವೆ ಇದರಿಂದ ।
ಗತಿಮುಕುತಿ-ಸಕಲ ಸಂಪದ ವೀವುದು ।

ಹುತವಹ ಮಂಡಲ ಅದರಲ್ಲಿ ನಿಲಸಿಹ ।
ಶಿತಿ ರೆಂಸಿ (ಕಿರಣ) ಮಂಡಲ ಆದರಲಿ ಉದಿಸುವ ।
ದ್ಯುತಿ ಭಾನುಮಂಡಲದ್ವಯು ತೋರುತಲಿದೆ ।
ಅತಿಭದ್ರಿಕೆಯಿದ್ದ ಹೊಳೆವದು ಅದು ನೋಡಿ ।
ಸತತ ಶ್ರೀವಾಸುದೇವ ವಿಟ್ಠಲ ಇದರಿದ್ದ ।
ಅತಿ ಸುಲಭ ಅತಿ ಸುಲಭ ಅತಿ ಸುಲಭ ಕಾಣೊ ॥

## ಉಗಾಭೋಗ (೪)

ಅದಿ ತಾಳ

ಮನ ಮನೋಭವನ ಪಿತನ ನೆನದನು ಸರಿಯಾಗಿರೆ ।
ತನು ಮನೊ ಅನುಕೂಲವಾಗಿ ಅನುಸರಿಸುತಲಿರುತಿರೆ ।
ತನುಜಸತಿ ತನುಸಂಬಂಧಿಗಳನು ಸಾರಿಯಾಗಿರುತಿರೆ ।
ಅನುಚರರ ವಿರೋಧದಿಂದ ತಾ ಉಪಚರಿಸುತಲಿರುತಿರೆ ।
ಅನುಪಮ ದೇಶಕಾಲದಲ್ಲಿ ವಿಹಿತಗಳು ಮಾಡುತಲಿರೆ ।
ಅನಿಮಿಷರೊಡೆಯ ವಾಸುದೇವ ವಿಠಲರೇಯನು ।
ದನುಜಮರ್ದನ ಅವನಪಾಣಿವನಜಕೆಬಂದು ಶಿಲುಕುವ ॥೧॥

## ಉಗಾಭೋಗ (೫)

ತಂಗಿ ನೋಡುವ ಬಾರೆ ಎನ್ನ ಮನೆಯೊಳ ।
ಅಂಗಣದೊಳಗೊಬ್ಬ ಶಾಮಲ ಪುರುಷ ।
ತಿಂಗಳ ಮೊಗದವ ಐಧಾನೆ ತನ್ನ ಸಾ।
ದಂಗಳಲ್ಲೆ ಎನ್ನ ಪ್ರಾಣ ಮುಖ್ಯ ।
ಅಂಗ ಸೋಕಲು ತಾನಿತರ ವಿಷಯಂಗಳ ।

ಸಂಗವ ಬಿಡಿಸುವ ಎನ್ನಪುಣ್ಯಾ ಆ ।
ತಂಗೆ ಸಮರ್ಪಿಸಿ ಸುಖಿಸುವ ನಮ್ಮನ್ನು ।
ಹ್ಯಾಂಗಾದರೂ ಮಾಡಲಿ ವಾಸುದೇವ ವಿಠಲ ॥ ೫ ॥

## ಉಗಾಭೋಗ (೬)

ಜ್ಞಾನಾನಂದಬಲದಿ ಎನಗಿಂದ ಕೃಷ್ಣಯ್ಯ ।
ನಿನಗೇನು ಮಿಗಿಲೀದೆ ಎನಗೆ ಪೇಳೊ ।
ನೀನಿದ್ದಾಮಾತ್ರವನ್ನು ಬಲ್ಲಿಯೋ ನೀನಿತ್ಯ ।
ನಾನಿದ್ದದಿಲ್ಲವನ್ನು ಕೊಡಬಲ್ಲೆ ।
ನಿನಗಧಿಕಾಶಕುತಿ ಬಲವುಂಟೊ ವೈಕುಂಠಾ ।
ಎನಗಾಧಿಕ ಭಕುತಿ ಬಲವೊ ಬಲವೊ ।
ನೀನಾಧಿಕಸ್ವಾಮ್ಯಸೌಖ್ಯವ ಬಲ್ಲಿಯೋ ।
ನಾನಧಿಕಾದಾಸ್ಯಸೌಖ್ಯ ಬಲ್ಲೇ ।
ಎನ್ನಯಾಗರ್ವವರಿದೆನೆಂಬದಿತ್ತೆ ।
ಎನ್ನಲಿದ್ದವಿಪರ್ಯಾಸವಸರಿಯೇ ।
ನಾನಿಷ್ಟರಿಂದಲೇ ನಮ್ರನಾಗುವೆನು ।
ನೀನಿತ್ತಬಲಸೌಖ್ಯ ಆಧಿಕವಾಗಿರಲಿ ।
ನೀನೇಬಲ್ಲಯೊಭಾವಾ ವಾಸುದೇವ ವಿಠಲ ।
ಆನೇನಂದರು ದಯಾಪಾಶದವಶನೊ ॥ ೧ ॥

## ಉಗಾಭೋಗ (೭)

ಪರಮ ಪಾವನಮೂರ್ತಿ ಹರಿಯೇ ನೀನಯ್ಯಾ ।
ಪರಮಪಾತಕಿಯೋ ನಾ ಧರೆಯೊಳೆಲ್ಲ ।
ಪರಮಕೆ ಪರಮಕೆ ಸರಿಹೋದ ಮೇಲಿನ್ನು ।
ಮರೆವರೇನಯ್ಯಾಪೂತನ ಮಾಡದೇ ।
ಪರಮಪಾವನ ಪರನೊಬ್ಬಿದ್ದರೆಯಿನ್ನು ।
ತೋರಬಹುದು ಚರಾಚರದೊಳಗೆ ।

ಪರಮಪಾತಕಿಯು ನಾನಾಗದಿದ್ದಡೆ ನಿನ್ನ ।
ಶರಣರಿಂದೆನ್ನ ಪೂತನ್ನ ಮಾಡಿಸೋ ।
ಪರಮಂತುನ್ನ ನೀ ಪೊರಿಯದಿದ್ದರೆ ನಿನ್ನ ।
ಬಿರಿದುವೊಂದೆನ್ನ ಸೆಳೆದು ವೈವೆನೋ ।
ಕರದಃ ವಾಸುದೇವ ವಿಠಲರೇಯ ।
ಮರೆಯುಸಲ್ಲದಿನ್ನು ಅರಿದ ಮೇಲೆ ॥ ೭ ॥

## ಉಗಾಭೋಗ (೮)

ಘನ್ನ ಕರುಣಿ ಗೋಪಾಲ ಬಾಲ ।
ಚಿನ್ನ ವತ್ಸನು ನಾನು ನೋಡಾ ।
ಎನ್ನ ಬಿನ್ನಪವ ಲಾಲಿಸಿ ಕೇಳ ನೀ ।
ಮನ್ನಕೆ ತರಲಿ ಬಹುದೆಲವೊ ರಂಗ ।
ಉನ್ನತ ಘೂಳಿಗಳು ಕೇಳುವವರೆ ಇಲ್ಲ ।
ಇನ್ನು ವೃಷಭಗಳ ಕೊರಳುಗಳುಸಡಲ್ಲೈಯ್ಯ ।
ಚನ್ನಾಗಿ ಮೇವುವವು ಬಣವಿಗಳನೆ ಅವು ।
ಅನ್ಯಾಯ ನೋಡಯ್ಯಾ ತೃಣವು ಮೆಲುವಾ ।
ಎನಗೆ ಬಂದಿದ್ದೇನೋಮಮತೆಯೆಂಬಾಹೆಬ್ಬಾ ।
ಕಣ್ಣಿಯಾ ಭಾರವ ಕೊರಳೊಳಗೆ ।
ಇನ್ನಿದು ಮುಪ್ಪುರಿ ಉರಲುಬೀಳುವದಾಗ ।
ನಿನ್ನ ಕಿವಿ ಕೇಳಿಪದೆ ಅದರ ಧ್ವನಿಯು ।
ಉಣ್ಣಿಸೋ ಉಡಿಸೊ ಇಲ್ಲವೆ ಆಡಿಸೊ ।
ಕಣ್ಣಿ ತಪ್ಪಿಸು ವಾಸುದೇವ ವಿಠಲರೇಯ ॥ ೮ ॥

## ಉಗಾಭೋಗ (೯)

ಸಂಸ್ಕೃತಿ ತೆರೆಯಲ್ಲಿ ಬಿದ್ದು ಮುಳುಗುವೆ ಕೈ ।
ಸೋತಿತೋರಂಗ ಇತ್ತ ನೋಡೋ ।
ಲೇಸಾಗಿ ಮೊದಲಿಗೆ ದಾಟಿದ ಜನರಂತು ।

ಈಸರಿತು ಮುಟ್ಟಲಂಜುವರೋ ।
ಈಸಮಯದಲ್ಲಿ ಈಸು ಜನರು ತಮ್ಮ ।
ಈಸೋ ಭರದಿ ತಿರುಗಿ ನೋಡರಿತ್ತ ।
ದಾಸಿರಾಯನ ಮಗಳಿಗೆ ಮಗನಾಗಿ ನೀ ।
ಕಾಸು ಬೇಡದಲೆ ದಾಟಿಸುವದಕೆ ।
ನೀ ಸುಕೃತದ ಗುತ್ತಿಗನಂಬಿಗನಾಗೆ ।
ವ್ಯಾಸಾ ನಿನಗಿನ್ನು ಇದುತಪ್ಪದೋ ।
ದಾಸರ ಶಿಸುವಿನ ಉಸಿರು ಮನಕೆತಂದು ।
ವಾಸುದೇವ ವಿಠಲ ಒಡೆಯಾ ಕೈ ಪಿಡಿಯೋ ॥ ೧ ॥

## ಉಗಾಭೋಗ (೧೦)

ಎಂದಿಗೆ ಕಾಂಬೆನಾ ಬೆಳಗು ಮುಂದಿನ್ನು ।
ಸಂದಿಸಿದೆ ಕಾಳುಗತ್ತಲೆ ಸುತ್ತಲಿ ।
ಮಂದಿ ಸಂಗುತಿಯು ಈ ಮಾರ್ಗದಲಿ ದೊರಿಲಿಲ್ಲ ।
ಒಂದು ಗ್ರಾಮಕೆವೈದು ಸೇರಿಸದೊ ।
ದಂದಶೂಕಾದಿ ಭೀಷಣ ಜಂತುಗಳ ಭಯದಿಂದಲೂ ದಣಿದೆ ।
ಮುಂದೇನು ಗತಿಯೋ ಹಿಂದೆ ಕಾಯಿದ ಕೃಷ್ಣ ।
ಇಂದಿಗೂ ಒದಗಲ್ಯಾಕೆ ಬಂದೆನ್ನನೊಂದು ಓ ಎನಲಿ ವಲ್ಲಿ ।
ಮುಂದಿನ ಕೇಳಿಕೆ ದೇವ ಓಡ್ಯಾಕೆ ಬರವಲ್ಲಿ ।
ಪೊಂದಿಲ್ಲಿಕಾವ ನರಸಿಂಗನೆಲ್ಲೋ ।
ನಿಂದು ದಿಟ್ಟಿಸಿನೋಡೆ ಇಲ್ಲವೆ ।
ಅಂದವೇನಯ್ಯಾ ಇದು ನಿನ್ನ ಮನಕೆ ।
**ತಂದೆ ವಾಸುದೇವ** ವಿಠಲ ಕೈಪಿಡಿದು ।
ಮುಂದೆ ಸನ್ಮಾರ್ಗದಿ ನಡಿಸಿ ಕಾಯೋ ॥ ೧ ॥

---

*

ಶ್ರೀ ಐಜಿಸ್ವಾಮಿಗಳು ಶ್ರೀ ವ್ಯಾಸತತ್ವಜ್ಞರು

# ಶ್ರೀ ವಾಸುದೇವ ವಿಠಲರ

## ಸುಳಾದಿಗಳು

### ಸುಳಾದಿ ೧

ರಾಗ- ನಾಟ ತಾಳ- ಧ್ರುವ

ಎನ್ನಯ ನಾಯಕೀಯ ಸ್ವಾಮಿಯ ಕಂಡಂತೆ ।
ನಿನ್ನ ನೋಡಲಾಯಿತೊ ಪ್ರಾಣಪ್ರಿಯ ದೂತನೆ ।
ಚನ್ನಾಗಿ ನೋಡೊ ಇವಳ ಪರಿಯನ್ನು ।
ಬಿನ್ನಪ ಮಾಡುವೆ ಅಪರಾಧಗಳ ।
ನಿನ್ನಂಥ ಘಟಕರ ಇನ್ನೊಬ್ಬರ ಕಾಣೆ ।
ಮನ್ನವಿಟ್ಟು ನೀನೆವೆ ವಾಸುದೇವ ವಿಠಲಂಗೆ ।
ಬಿನ್ನೈಸಿಕೂಡಿಸೊ ಘನ್ನದಯಾನಿಧೆ ॥ ೧ ॥

ಮಟ್ಟತಾಳ

ಪತಿಯ ಬಳಿಯಲಿದ್ದು ಪತಿಯ ಮನವರಿಯಳೊ ।
ಅತಿಶಯ ಸುಖವಿತ್ತು ವಿಭವತೋರಿಸಲಾಗ ।
ಮತಿಯಲಿ ಸುಖ ರತಿಯಲಿ ಮನ ಉಬ್ಬಿ ।
ಸ್ಮೃತಿಯನು ಕಳಕೊಂ ।
ಡತುಳಜ್ಞಾವ ಮೀರಿ ಹಿತ ಗೆಳತಿಯ ಮುಂದೆ ।
ರತಿಯ ಸುಖವ ಪೇಳೆ ಪತಿವಾಸುದೇವ ವಿಠಲ ।
ಪತಿತಳು ಇವಳೆಂದು ಅತಿವ್ಯವಹಿತನಾದಾ ॥ ೨ ॥

ತ್ರಿವಿಡಿ ತಾಳ

ಸತಿಯರೊಳಗಿವಳು ಅತಿಮುಗ್ಧ ವಧುವಳು ।

ಗತ ಆಗತವೊಂದೂ ಮತಿಯಲ್ಲಿ ಅರಿಯಳೊ ।
ಖತಿಯನ್ನು ತನಗೆ ತಾ ಕೃತಿಸಿಕಂಡವರಲಿ ।
ಅತಿಬಾಯಿ ಬಿಡುವಳೊ ಗತಿಯೇನು ಇದಕಿನ್ನು ।
ರತಿ ಪತಿ ಪಿತ ವಾಸುದೇವ ವಿಠಲರೇಯ ।
ಹಿತವಾಗುವಂತೆ ಉಪಕೃತಿಮಾಡೊ ಹಿತನೆ ॥ ೩ ॥

ಅಟ್ಟತಾಳ

ಧವಬಿಟ್ಟ ವಿರಹದ ಭವಣಿಯಿಂದ ಅವಳಿಗೆ ।
ನವಗಂಧಗಳೆ ಬಂಧ ಸುವಸ್ತ್ರವೇ ಶಸ್ತ್ರ ।
ಭವನ ವೆಂಬೊದೆ ಬಲು ಕುವನವಾಗಿವಳಿಗೆ ।
ನವಚೂತ ಪಲ್ಲವ ಸವಿಧಾವಿ ಪಲ್ಲವ ।
ವಿವಿಧ ತಾಪಗಳನುಭವಿಸುವ ಇವಳನ್ನು ।
ಭುವನೇಶ ಶ್ರೀ ವಾಸುದೇವ ವಿಠಲ ಪಾದ ।
ಸುವಿಮಲತರ ನಖಶಶಿ ಛವಿಯಿಂದ ಪಾಲಿಸೊ ।
ಪ್ರವಣನಾಮರಿಯೆನೋ ಭುವನದೊಳಗೆ ನಿನ್ನ । ॥ ೪ ॥

ಆದಿತಾಳ

ಅನಲಿ ಬಹುದುವೊಂದು ಅನಲಕ್ಕೆ ಬಾರದು ।
ಇನಿತಪರಾಧದಿ ದಣಿವದೆ ಸಾಕು ಕನಿಸಿಲಿ ಬೇಡೆಂದು ।
ಮುನಿಸಿಲಿ ಹೇಳೆಂಬನುಬ್ಯಾರಿದ್ದಾನೆ ।
ಅನುದಿನ ನೀಬಲ್ಲಿ ವನಜಾಕ್ಷಿಯ ತನು ।
ಮನ ಅಸು ಉಳಿಸೆಂದು ವಿನಯದಿ ವಾಸುದೇವವಿಟ್ಠಲಗೆ
ಪೇಳೊ ॥ ೫ ॥

ಜತೆ

ಒಲಿದು ವಾಸುದೇವ ವಿಠಲನುಬಾಲಿಗೆ ।
ಸುಳಿದು ಪೊರೆ ಎಂದು ತಿಳಿಸೋ ಏ ಪ್ರೀಯಾ ॥ ೬ ॥

## ಸುಳಾದಿ ೨

ರಾಗ- ನೀಲಾಂಬರಿ ಧ್ರುವ ತಾಳ

ಅಕ್ಕಾ ಎನ್ನಯ ಸ್ಥಿತಿ ಕೇಳೆ ಆರಿಗೆ ಪೇಳ ।
ತಕ್ಕದ್ದಲ್ಲವೆ ಇದು ನಗುಬಾಟಲೇ ।
ಚೊಕ್ಕ ಸ(ಪ)ತಿಯರಲ್ಲಿ ವೊಲದಿತ್ತಾಬಲುಸುಖ ।
ಚಕ್ರಧರನು ಎಂದು ಕೇಳುತಲೀ ।
ಚಿಕ್ಕವಳೆ ನಾನು ಏನು ಅರಿಯೆ ತಾಯಿ ।
ಘಕ್ಕನೆವ್ರೊಳಗಂಟು ಸಡಲಿತವ್ವಾ ।
ಮಕ್ಕಳು ನಗುವದು ಎಚ್ಚರಿಲ್ಲವೆ ದೇಹ ।
ಮಿಕ್ಕಾದ ಪರವಿಲ್ಲ ಮರುಳಾದಿನೇ ।
ಅಕ್ಕಟಕ್ಕಟ ವಾಸುದೇವ ವಿಠಲರೇಯಾಹ್ಯಾಗೆ ।
ಅಕ್ಕರವನೆ ಮಾಡಿ ಎನ್ನ ಸಂತೈಸುವಾ ॥ ೧ ॥

ಮಟ್ಟ ತಾಳ

ತರುಳೆ ತಂಗಿಯೆ ಕೇಳು ಎದಿ ಹಾರಲಿಬೇಡ ।
ಮರಳು ಪರಿಯುವೊಂದೇ ತರುಣೇರಿಗೆಲ್ಲ ।
ಮರಿಯದೆ ರಹಸ್ಯ ಸರಣಿಯು ಪೊಂದಿರೆ ।
ಪರತರ ವಾಸುದೇವ ವಿಠಲ ದೊರಕುವಾ ॥ ೨ ॥

ತ್ರಿವಿಡಿ ತಾಳ

ಆನು ಹುಡುಗಿ ಇನ್ನು ಹೃದಯ ವಿಸ್ತೃತವಿಲ್ಲ ।
ಜ್ಞಾನವು ರತಿಯಲ್ಲೀ ಮೊದಲಿಗಿಲ್ಲ ।
ಹೀನಳು ಗುಣದಲ್ಲಿ ರೂಪದಲಿ ಚಲುವಿಕೆ ।
ಏನಾದರೂ ಇಲ್ಲ ಹ್ಯಾಗೆ ತಾಯೀ ।
ಭಾನು ಕೋಟಿ ಸನ್ನಿಭವಾಸುದೇವ ವಿಠಲ ।
ತಾನು ಮೆಚ್ಚುವ ಎನ್ನ ಸುಗುಣೋತ್ತಮಾ । ॥ ೩ ॥

ಅಟ್ಟತಾಳ

ಗುಣವ್ಯಾಕೆ ರೂಪ್ಯಾಕೆ ದೋಷಗಳಿರಲ್ಯಾಕೆ ।
ಮನ ಮೆಚ್ಚಿಕೆವೊಂದೆ ಆತಂಗೆ ಮುಖ್ಯ ।
ಅನುಮಾನಿಸಬೇಡ ಆತನ್ನ ಮೊರೆಹೋಗು ।
ಮನದಾಶೆ ನೀಡುವ ವಾಸುದೇವ ವಿಟ್ಠಲ ॥ ೪ ॥

ಆದಿತಾಳ

ಧ್ವನಿ ಕೇಳಿಸುತಿದೆ ಕೇಳಿ ಕೊಳಲಿನ ಹರಿಯು ।
ಮನಿ ಸೇರುತಲಿವೆ ಗೋವುಗಳು ನಿಶ್ಚಿತ ।
ನಾನ ನಿಶ್ಚಿತ ಮಾಡಿ ಎದುರಿಗೆ ತೆರಳುವೆ ।
ಮನ ಮೆಚ್ಚಲಿಹನೆ ಹರಿಯುನು ನೀನು ।
ಬಿನಗು ವಿಷಯು ಬಿಡು ಮನಸು ಏಕವ ಮಾಡು ।
ವನಜಾಕ್ಷ ವಾಸುದೇವ ವಿಠಲ ಬಂದಾ ॥ ೫ ॥

ಜತೆ

ಆನು ಧನ್ಯಳಾದಿನೆ ಆನು ಕೃತಾರ್ಥಳು ।
ತಾನಿಂದ ವಾಸುದೇವ ವಿಠಲರೀಯಾ ॥ ೬ ॥

## ಸುಳಾದಿ ೩

ರಾಗ ವರಾಳಿ ಧ್ರುವ ತಾಳ

ಅನೇಕ ಶಕುತಿಯುಳ್ಳವನೆಂದು ।
ಅನೇಕ ಯುಕುತಿಯುಳ್ಳವನೆಂದು ।
ಅನೇಕ ಆಗಮ ಕೇಳಿ ಬಲ್ಲೆನಯ್ಯಾ ।
ಅನೇಕ ಕಾರ್ಯದಿ ಅನುಮೋಯಿಸುವೆ ।

ಅನೇಕ ಬೇಡುವೆ ನೀಡೋಹಯವದನಾ ।
ಅನು ಭಯನಾಗಿನ್ನು ಎನಿತು ಬಾಹುದೈಯ್ಯಾ ।
ಅನುಭವ ಮಾತುರ ಎನಗೆ ಪಾಲಿಸುದೇವ ।
ನೀನೇಕನಾಗಿ ಮನಸು ಶಳವಿಲೀ ।
ಅನೇಕ ತಾವಾಗಿ ವಿಷಯಂಗಳೂ ।
ಅನವರತದಿ ಶಳಿಯೆ ಮಿಗಿಲಿನ್ನು ।
ಅನುಭವ ಎನಗಿನ್ನು ಎನಿತು ಬಾಹುದಯ್ಯ ।
ಅನುಭವ ಮಾತುರ ಎನಗೆ ಪಾಲಿಸೊ ದೇವಾ ।
ನೀನೆ ವಾಸುದೇವ ವಿಠ್ಠಲೆನ್ನ (ತಿಳಿದಿನ್ನು ನಿನ್ನ ಕಾಡಲನ್ಯ)
ಶಣಿಸದಂತಲೆಮಾಡು ॥ ೧ ॥

ಮಟ್ಟತಾಳ

ಮೊದಲಿನ ಭಕುತರು ನಿನಗೆ ಕೊಡುವದೇನು ।
ಹೃದಯದ ಸಾಕ್ಷಿಯೆ ಅನುಬಿಡುವದೇನೊ ।
ಮದನ ಜನಕನೆ ಅವರಿಂದ ನಿನಗೇನೊ ।
ಸದಯ ವಾಸುದೇವ ವಿಠಲಪೂರ್ಣಕಾಮಾ ॥ ೨ ॥

ತ್ರಿವಿಡಿತಾಳ

ನಿನ್ನ ಪ್ರೇರಣೆ ಹೊರತು ಅರನ್ನ ತಾವೇ ಸಾ ।
ಧನ್ನ ಮಾಡುವರುಂಟೆ ನೀಪಿಡಿ ಕೈಯ್ಯ ।
ಎನ್ನ ಪ್ರೇರಿಸಲು ಸಾಧನ ಮಾಡಲಾರಿನೆ ।
ಘನ್ನ ವಾಸುದೇವ ವಿಠಲ ಕರುಣಿಯೋ ॥ ೩ ॥

ಅಟ್ಟ ತಾಳ

ಅನ್ಯಸಾಧನಗಳು ಕೊಡುಕೊಡದಲೆಬಿಡು ।
ಉಣ್ಣಿಸೆನ್ನಯ ಕರ್ಮ ಪಣ್ಣಾದರೆ ।
ಘನ್ನವಾಸುದೇವ ವಿಠಲರೇಯ ।
ನಿನ್ನಚರಣಸ್ಮೃತಿ ಅನವರತವೀಯೊ ॥ ೪ ॥

ಆದಿತಾಳ

ಬೊಮ್ಮನಂತೆ ಲೇನು ಜಗವ ಸೃಜಿಸುವಿನೆ ।
ಉಮ್ಮೆಯರಸನಂತೆ ಜಗವನಳಿವೆ ।
ಸುಮ್ಮನಸರ ಓಲ್ ಜಗವನಾಳುವಿನೆ ।
ಸನ್ಮುನಿಗಳ ಪಾದ ಸೇವಿಯು ಬೇಡುವೆ ।
ನಮ್ಮ ವಾಸುದೇವ ವಿಠಲರೇಯಾ ।
ಎವ್ಮಾತುರಕೆ ನೀತಡ ಮಾಡುವರೇ ॥ ೫ ॥

ಜತೆ

ಆನೇನರಿಯೆ ವಾಸುದೇವ ವಿಠಲರೇಯಾ ।
ನೀನೇವೆ ವೊಲಿದೆನ್ನ ದಯದಿಂದ ಸಲಹೋ ॥ ೬ ॥

---

## ಸುಳಾದಿ ೪

ರಾಗ ಭೈರವಿ ಧ್ರುವ ತಾಳ

ಆರಿಗೆ ಉಸರಲಿ ಆರಿಗೆ ಮೊರೆ ಇಡಲಿ ।
ಆರೆನ್ನ ಮನದಳಲು ನಿವಾರಿಸುವರ ಕಾಣೆ ।
ಮೇರೆ ಇಲ್ಲದೆ ಪೋದ ವಿಷಯ ಶಳವುತಿದೆ ।
ಭಾರೊಮ್ಮೆ ಮುಂದಣಾಶಾತೋರಿ ಎಳುವುತಿದೆ ।
ತೋರಿನೀ ತೋರಿಸು ತೋರದೆ ಪೋದರೆ ಎನ್ನ ಎದೆ ಮನ ।
ಹಾರಿ ಬೀಳುತಲಿದೆ ಗತಿ ಏನೊ ಎಲೊ ಕೃಷ್ಣ ।
ಸಾರಿ ಸಾರಿಗೆ ಇದನೆ ಬೇಡುವೆನೇ ಅನ್ಯನ್ನ ।
ದಾರಿ ತಪ್ಪಿಸಿ ನಿನ್ನ ದಾರಿಯು ಪಿಡಿಸೆನ್ನ ।
ಕಾರುಣಿಕ ರಂಗ ಮೊರೆಯೊಕ್ಕ ಭಕತನ್ನ ।
ಮಾರಿಗೆ ವೊಪ್ಪಿಸದೆ ಸಾರೆ ಗರಿಯೊ ದೇವ ।

ವಾರಿಜಾಕ್ಷ ವಾಸುದೇವ ವಿಠ್ಠಲರೇಯು ।
ದೂರ ( ಬೇರಿ ) ನೋಡದೆ ದಯವಾರಿಧೆ ಪೊರೆಯೆನ್ನ
ಪೊರಿಯೊ ॥ ೧ ॥

ಮಟ್ಟತಾಳ

ಧನದಲ್ಲಿ ಬಡತನ ಸಹಿಸಲಿ ಬಹುದೈಯ್ಯಾ ।
ಜನಪತಿ ಕೋಪವ ತಡಿಯಲಿ ಬಹುದೈಯ್ಯಾ ।
ವನಿತೆಯರ ಕಟಾಕ್ಷವಕ್ಷವಿಸಲಿ ಬಹುದಯ್ಯಾ ( ಕಟಾಕ್ಷ
ಬಿಡಕಲಿ ಸಯ್ಯಾ ವೈಯ್ಯಾ) ।
ಮನೆಯೊಳು ಕಲಹವ ತಾವರಿಸ ಬಹುದೈಯ್ಯಾ ।
ಜನಗಳ ದೂರನ್ನ ಸೈರಿಸ ಬಹುದೈಯ್ಯಾ ।
ವನಜ ನಯನ ವಾಸುದೇವ ವಿಠಲ ನಿನ್ನ ।
ಮನದಲಿ ಯೋಚಿಸಿನ್ನು (ಮುನಿಸಿನ್ನು) ಸಹಿಸಲಿ ವಶವಲ್ಲ॥೨॥

ತ್ರಿವಿಡಿ ತಾಳ

ಏನು ಬಿಟ್ಟರೆ ಬಿಡೊ ಏನು ಕೊಟ್ಟರೆ ಕೊಡೊ ।
ಆನೆ ನಂಬುವದಿಲ್ಲ ಮನದೊಳು ಇಸಿತನ್ನ ।
ನೀನೆವೆ ಕೇಳ್ ಕಾಂತಾ ಮನಸಿನ ಬಯಕೆದೆ ।
ಮಾನದೊಡಿಯ ವಾಸುದೇವ ವಿಠಲರೇಯಾ ।
ದೀನ ವತ್ಸಲದೇವ ಮುನಿಸಿನ್ನು ಬಿಡೊಕೃಷ್ಣ ॥ ೩ ॥

ಅಟ್ಟತಾಳ

ಒಲಿಸಿ ವನಿತೆ ಎನ್ನ ತಿಳಿಸಿ ಸೌಖ್ಯಗಳೆಲ್ಲ ।
ಛಲಿಸಿ ಅವಳಕೂಡ ಪೊಳತಲ್ಲ ಮುನಿಸೀಗ ।
ಬಲುದೋಷ ಇದರಿಂದ ತಿಳಿದಾತ ನೀನಲ್ಲೆ ।
ಸುಳಿಯೊ ವಾಸುದೇವ ವಿಟ್ಠಲ ದಯಾನಿಧೆ ॥ ೪ ॥

ಆದಿತಾಳ

ಮುನಿಗಳು ಬಹು ವ್ಯಾಪ್ತಿ ನಿನಗೆ ಪೇಳುವದೆಲ್ಲ ।
ಎನಗೊಂದಾದರು ಅದು ಮನಕೆ ಬಾಹುದಲ್ಲೊ ।

ಘನ ವ್ಯಾಪ್ತಿಯ ನಿನಗಿದೆ ಅಣುವಾದ ಎನ್ನ ।
ಮನವನು ಪೋಗದೆಲಿಕ್ಕ್ಯದಿನೆ ಲೇಶ ನಿನಗಿದೆ ।
ಬಿನಗು ವಿಷಯಗಳು ದಣಿಸೋವೆ ಆದರನ್ನ ।
ಘನ ಮಹಿಮನೆ ವಾಸುದೇವ ವಿಠಲರೇಯಾ ।
ಅನುಭವಕೊಡು ಕಂಡ್ಯಾ ದನುಜಮರ್ದನಕೃಷ್ಣ || ೫ ||

ಜತೆ

ಭಕತರ ದೂರಿಗಂಜ್ವ ವಾಸುದೇವ ವಿಟ್ಠಲ ।
ಶಕತಾಳಿಮಿಗಿಲಾಗಿ ಬಿನ್ನೈಸುವದಕೆ || ೬ ||

---

## ಸುಳಾದಿ ೫

ಗುರುಗಳಾದ ಶ್ರೀಭುವನೇಂದ್ರರಿಂದ ಆಶ್ರಮ ಸ್ವೀಕರಿಸಿದ ನಂತರ ವಿಭುಧೇಂದ್ರ ಕರಾರ್ಚಿತ ೧೬ ಬಾಹು ನರಸಿಂಹ ದೇವರ್ನನ್ನು ಕೊಟ್ಟಾಗ್ಗೆ ಮಾಡಿದ್ದು.

ರಾಗ ನೀಲಾಂಬರಿ ಧ್ರುವ ತಾಳ

ಸೃತಿ ವಾರಾಧಿಯೊಳಗೆ (ಸರತಿನೊಳಗೆ) ಶಳವಿಗೆ ಪೋಗುವಂಗೆ।
ಗತಿ ಯಾಗಿ ಧಡಕೆ ಸೇರಿಸಿದ್ಯೋಸ್ವಾಮಿ ( ಹರಿಯೆ ) ।
ಯತಿ ಮಾಡಿ ಕೂಡಿಸಿದಿ ನಿನ್ನ ಪಾದಾಂಬುಜದಲ್ಲಿ ।
ರತಿ ಕೊಟ್ಟು ಉದ್ಧರಿಸೊ ವಾಸುದೇವ ವಿಠ್ಠಲ || ೧ ||

ಮಟ್ಟತಾಳ

ಮುದಕಿಯ ಕೈಯಲ್ಲಿ ಪುಲಿವಶ ವಾದಂತೆ ।
ಮದಡನ ಕೈಯಲ್ಲಿ ಸಿಕ್ಕಿದ್ಯೋ ನರಹರಿಯೆ ।
ಒದಗಿ ಸೇವಿಯ ಮಾಡಲಾರೆ ಜರಿಯು ಬಂತು ।
ಮುದದಿ (ವದನದಿ) ತುತಿಯ ಮಾಡಲಾಪಿನೆ ಸಹಸ್ರ ।
ವದನಗೆ ವಶವಲ್ಲ ವಾಸುದೇವ ವಿಠ್ಠಲ || ೨ ||

ತ್ರಿವಿಡಿ ತಾಳ

ದಾನವಿಲ್ಲದಾಶ್ರಮ ಯಜನವು ಮೊದಲಿಲ್ಲ ।
ಸ್ನಾನ ಮಾತ್ರವು ಮಾಡಿ ನಿನ್ನ ಮೂರುತಿಗಳನು ।
ಧ್ಯಾನವ ಮಾಡಿಸೊ ಅನುದಿನ ತಪ್ಪದೆ ।
ಹೀನರ ಕೃತಿಯನ್ನೆ ಖಂಡನೆ ಮಾಡಿಸೊ ।
ಜ್ಞಾನ ಪುಟ್ಟುವಂತೆ ಪ್ರವಚನ ಮಾಡಿಸೊ ।
ದೀನ ವತ್ಸಲ ವಾಸುದೇವ ವಿಠಲರೇಯಾ || ೩ ||

ಅಟ್ಟ ತಾಳ

ಪಾಮರ ಜನರೊಳು ಸಿಕ್ಕಿದೆ ನಿನ್ನಯ ।
ನಾಮವ ಪೇಳುವ ಜನರನ್ನ ಕಾಣೆನೊ ।
ಸ್ವಾಮಿ ಏನಾಗತಿ ಎನ್ನ ಹೃದಯವೆಂಬ ।
ಧಾಮದಿ ಪೊಳೆಯೊ ವಾಸುದೇವ ವಿಟ್ಠಲ್ಲ || ೪ ||

ಏಕತಾಳ

ಕಾಕ ಕುಲದೊಳು ಕೋಕಿಲ ದಣಿವಂತೆ ।
ಕುಂಕ (ಕುಹಕ) ಜನರೊಳು ಸಿಕ್ಕಿದೆ ನರಹರಿ ।
ಲೌಕಿಕ ಧರಟಿಗಳಲ್ಲದೆ ಉತ್ತಮ ।
ಶ್ಲೋಕನ ವಾರ್ತೆ ನುಡಿವವರಿಲ್ಲವೋ ।
ಪಾಕಶಾಸನ ನನುಜ (ದಯದಿಂದಾಲೋಕಿಸಿ) ಪೊರಿಯೊ ಕೇಳೆನ್ನ ।
ವಾಕು ಹೇ ವಾಸುದೇವ ವಿಟ್ಠಲ || ೫ ||

ಜತೆ

ಯಾತಕ್ಕೆ ನರಸಿಂಹ ನೀನೆವೇ ಎನ್ನ ಬೆ ।
ನ್ನಾತು ರಕ್ಷಿಸೊ ವಾಸುದೇವ ವಿಠಲರೇಯಾ || ೬ ||

## ಸುಳಾದಿ ೬

ರಾಗ ಭೈರವಿ ಧ್ರುವ ತಾಳ

ಒಲ್ಲೆ ವಿಷಯುಗಳೆಂದವರಿಗೆ ಒಂ ।
ದಲ್ಲದೆ ದ್ವಿಗುಣಿತ ವಿಷಯವೆಂಬ ।
ಫಲ್ಲಿಸುತಿಪ್ಪ ಆದರಲ್ಲಿ ನೀನೆವೆ ।
ಬಲ್ಲಿದನೆಂಬನುಭವಸಿದ್ಧ ।
ಒಳ್ಳಿತು ನಾವೊಂದು ಮಾಡುವೆ ಬಿನ್ನಪ ।
ಸಲ್ಲಿಸಬೇಕಲ್ಲದಿದ್ದರುಪೇಕ್ಷ ।
ಸಲ್ಲದೊ ಕೃಷ್ಣಯ್ಯಾ ವಿಷಯದೊಳಿದ್ದವದ್ದು ।
ಸಿಲ್ಲುಕದ ಜನರು ಇಪ್ಪರಂತೇ ।
ವಲ್ಲಭ ನೀನಿದು ತೋರಿಸೊ ಎನ್ನಲ್ಲಿ ।
ಇಲ್ಲದಿದ್ದರೆ ಮಹಾ ಶಕುತಿ ಏನೋ ।
ಮಿಳ್ಳಿತಯೇ ನೀನಾಗಿ ವಾಸುದೇವ ವಿಟ್ಠಲ ।
ಒಲ್ಲಿಯೊ ವಿಷಯದ ಸಾರಭೋಕ್ತಾ । ॥ ೧ ॥

ಮಟ್ಟ ತಾಳ

ಬಡತನ ಹಿಂಗದಿರೆ ಧೊರೆಗಳು ತಾವಾಗಿ ।
ಪಿಡಿದು ಆವಗೆ ಮೇಟಿ ಪೊಲಗಳು ಕಟ್ಟೀಗ ।
ತಡಿಯದೆ ಬೇಕಾದ ಸಕಲ ಸಾಧನ ನೀಡಿ ।
ನಡಸುತ ಬರುವಂಥ ಧೊರಿಗಳ ಅಭಿಮಾನ ।
ಪೊಡವಿಗೆ ಪತಿ ವಾಸುದೇವ ವಿಟ್ಠಲ ನೀನೆ ।
ಒಡೆಯ ಎನ್ನ ಭಾರ ನಿನಗಲ್ಲದೆನಗೇನೋ ॥ ೨ ॥

ತ್ರಿವಿಡಿ ತಾಳ

ನೀನೆ ಗುಣಾಕರನೊ ನಿಖಿಳ ಲೋಕದಲ್ಲಿ ।
ಆನೆ ಅನೇಕನೇಕ ದೋಷಾಕರನೋ ।

ನೀನೆ ಪರಮ ಶಕುತಿ ಉಳ್ಳಮರನಿಕರದೊಳು ।
ಆನೇವೆ ದುರ್ಬಲರೊಳು ಮೊದಲೀಗ ।
ನೀನೆ ಸ್ವಾತಂತ್ರ ತ್ರಿವಿಧ ಸತ್ವಗಳಲ್ಲಿ ।
ಆನೆ ಪರಾಧೀನ ಅಖಿಳರೊಳಗೇ ।
ನೀನೆವೆ ಭಾಗ್ಯದೇವತಿಯ ವಲ್ಲಭನೊ ।
ಆನೆವೇ ಕೃಪಣರೊಳು ಕೃಪಣನ್ಯೈಯ್ಯಾ ।
ಏನೆಂಬೆ ಹೀಗಿರಲು ಎನ್ನಯ ಬಿನ್ನಪ ।
ನೀನೇಕ ಚಿತ್ತದಿ ಕೇಳುವದು ।
ಆನೆವೇ ನಿನಗೆ ಮರುಳಾದೆನೇನಯ್ಯಾ ।
ಶ್ರೀನಾಥ ನಿನ್ನ ಪ್ರೇರಣೆಯಲ್ಲದೆ ।
ಅನಾಥ ಬಂಧು ವಾಸುದೇವ ವಿಟ್ಠಲರೇಯಾ ।
ನೀನಾದರದಿ ಕೇಳೊ ದುರಿತ ಕೀಳೊ । ॥ ೩ ॥

ಅಟ್ಟ ತಾಳ

ಕರ್ದಮ ಸೌಭರಿ ಕಶ್ಯಪ ಮೊದಲಾದ
ದುರ್ದಮ ಮುನಿಗಳು ನಿನಗೆ ಮಾಡಿದುದೇನೊ ।
ನಿರ್ದಯ ಎನ್ನಲ್ಲಿ ಮಾಡುವರೇ ದೋಷ ।
ಮರ್ದನ ಶ್ರೀ ವಾಸುದೇವ ವಿಟ್ಠಲರೇಯಾ । ॥ ೪ ॥

ಆದಿ ತಾಳ

ಬಲು ವಿಧ ಸಾಧನ ಜಗದೊಳು ನೀ ಬಲ್ಲಿ ।
ಛಲವ್ಯಾತಕೊ ಬಡವಗೆ ಇದರಲ್ಲಿ ।
ತಿಳಿದ ಸಾಧನವಿತ್ತು ವಾಸುದೇವ ವಿಟ್ಠಲ ।
ಫಲವಾಗುವಂತೆ ನಿನ್ನ ಭಕುತಿಯ ನೀಡೊ ॥ ೫ ॥

ಜತೆ

ಸಾಧನದೊಳಗಿದ್ದು ವಾಸುದೇವ ವಿಟ್ಠಲಾ ।
ರಾಧನೆ ಮಾಡಿಸೋ ಸಾಧ್ಯ ನೀನಾಗೀ ॥ ೬ ॥

## ಸುಳಾದಿ ೭

ರಾಗ- ನೀಲಾಂಬರಿ, ಧ್ರುವ ತಾಳ

ನಂಬಿದವಳೀಪರಿ ಮಾಡಿದರೆ ಮುಂದೆ ।
ನಂಬುವರೆಂತೊ ನಿನ್ನಂಬುವ (ನಂಬಿದವ) ರೈಯ್ಯಾ ।
ಅಂಬುಜನಾಭನೆ ಯೋಗ್ಯತೆ ಮೀರಿ ನಾನು ।
ಹಂಬಲಿಸಿದವಳ ಪೊಮ್ಮಿಗನ್ನ ।
ಅಂಬುಜವ ಸೋಲಿಪ ಪದಯುಗಳನ್ನು ।
ಕಾಂಬುವ ಬಯಕೆಪೊಂದೆ ಎನ್ನೊಳಗೆ ।
ಉಂಬುಡುವುದಕ್ಕೆ ಲೇಶ ಕೊರತೆಗಳಿಲ್ಲ ।
ಕಂಬು ಕಂಠ ನಿನ್ನ ಪಾದವೆ ಸಾಕ್ಷಿ ।
ಸಂಭ್ರಮಗಳಾದರು ಕರಸದೆ ಪೋದ ಮೇಲೆ ।
ಸಂಬಂಧವೇನುಂಟು ಪೇಳಿಕೊಳಲಿ ।
ನೀ ಬಂಧುಗಳ ನೋಡಿ ವಿನಯದ ನುಡಿಗ ।
ಳಂಬಂತೆ ಮಾಡಿಸಲಿಲ್ಲ ಧೊರಿಯೆ ।
ಬೆಂಬಿದ್ದಲ್ಲಿ ಒಳ್ಳೇದು ಕರಿಸಿಕೊ ಮುಂದೆನ್ನ ।
ಅಂಬುಜಾಕ್ಷ ವಾಸುದೇವ ವಿಠ್ಠಲರೇಯಾ ॥ ೧ ॥

ಮಟ್ಟತಾಳ

ನಂದಿದರೊ ಕುಂದಿದರೊ ತಾ ಬಂಧಿಸಲೊ ।
ನಿಂದಿಸಲೋ ತಮ್ಮಂದಿ ಆವಪರಿಯಲಿದ್ದರು ।
ಒಂದೇ ಪರಿ ನೀ ನಿಲ್ಲಿರುವೆ ।
ನಂದಿಸುವೆ ನಗುತಲೀವೆ ನೀ ।
ಒಂದು ಚಿತ್ತದಿಲ್ಲದಿಲ್ಲವೊ ।
ಎಂದು ವಾಸುದೇವ ವಿಟ್ಠಲ ನಿನ್ನ ।
ನಿಂದೆ ನಾನು ತಾಳಲಾರಿನೋ ॥ ೨ ॥

ತ್ರಿವಿಡಿತಾಳ

ವೇಳೆಗೆ ನೀ ಕೇಳಿ ಮನಕೆ ತೋರದಿರ್ದಡೆ ।

ಕಾಲ ನಿಲ್ಲುವದಿಲ್ಲ ಸಾಗುತಿದೆ ।
ಶ್ರೀಲೋಲ ವಿರಹದಿ ಬಹಳ ಬಡವಾದ ।
ಕಾಲದಿ ಗುರುತಿನ್ನು ಸಿಗಬಲ್ಲದೆ ।
ಕಾಲಿಗೆ ಎರಗುವೆ ಒಳಗೆ ವಿಚಾರಿಸಿ ।
ಪಾಲಿಗೆ ಕರಸಯ್ಯಾ ವಾಸುದೇವ ವಿಟ್ಠಲ ॥ ೩ ॥

ಅಟ್ಟ ತಾಳ

ನಡತೆ ನುಡತೆಗಳು ಬಹುಕಾಲ ಬಿಟ್ಟರೆ ।
ಕೆಡುತಿವೆ ಪಾಮರ ಜನ ಸಂಗದಿ ।
ಒಡೆಯ ತಿರುಗಿ ತಿದ್ದಿಕೊಂಬುವದಾಯಾಸಾ ।
ಹಿಡತೆ ಹಿಡಿಯಬೇಕೊ ಬಿಟ್ಟುದಂತಲೆ ।
ಒಡತಿ ಆಡುವ ಮಾತು ಒಂದಲ್ಲದೆ ಇದರೊಳು ।
ಒಡೆಯಗೆ ಇರಬೇಕೊ ಮನಸಿನಲ್ಲಿ ।
ಕಡಿಗು ಬಿಟ್ಟವಳಲ್ಲ ಇನ್ನಾದರು ಮುಂದೆ ।
ತಡಿಯದೆ ಕರಿಸಿಕೊ ವಾಸುದೇವ ವಿಟ್ಠಲ ॥ ೪ ॥

ಆದಿ ತಾಳ

ಪುರದಲ್ಲಿದ್ದವಳ ಬಳಿಗೆ ಬಂದೊಮ್ಮೆ ।
ಆರು ವಿಚಾರಿಸುವವರನ ಕಾಣೆ ।
ಕಾರುಣಿಕ ಜನ ಇಲ್ಲದಾಯಿತು ।
ಕಾರಣವಿಲ್ಲದೆ ಮುನಿವರೆ ।
ಧಾರುಣಿಯೊಳು ನಿನ್ನ ಕೋಶವು ಕೊಡಲು ।
ತೋರುವ ಕೆಲವು ಗೌಪ್ಯಗಳು ।
ಶ್ರೀಮಾರಮಣ ವಾಸುದೇವ ವಿಟ್ಠಲ ನಿನ್ನ ।
ಚಾರು ಚರಣ ಯುಗಳವ ತೋರಯ್ಯಾ ॥ ೫ ॥

ಜತೆ

ಎಷ್ಟು ಬಿನ್ನಪವೆಂದು ಸಿಟ್ಟು ಮಾಡಲಾಗದು ।
ಶ್ರಿಷ್ಟೇಶ ಗತಿ ಏನು ವಾಸುದೇವ ವಿಟ್ಠಲ ॥ ೬ ॥

## ಸುಳಾದಿ ೮

ರಾಗ ನಾಟ ಧ್ರುವ ತಾಳ

ಶ್ರೀ ನಾರಸಿಂಹ ದೇವ ನೀನೆ ಸಾರ ಹೃದಯು ।
ಕಾರಣ ಕಾರಣಕನಿಮಿತ್ಯ ಬಂಧೊ ।
ತೋರದೊ ಮುಂದಿನ ಮಾರಿ ಎನಗೆ ಇನ್ನು ।
ತೋರಿಸೊ ಪರಿಹಾರದುಪಾಯುವ ।
ತೋರಿಪ ದೇವ ನೀ ಇನ್ನೊಂದು ಎನಗಿಲ್ಲ ।
ಕಾರುಣಿಕ ದೇವತಿ ನೀನೆ ಸ್ವಾಮಿ ।
ವಾರಿಗೆ ಮಾರಿಗೂ ನಿನ್ನ ಹೊರತಿನ್ನಿಲ್ಲ ।
ಸಾರಿದೆ ನಿನ್ನಂಘ್ರಿ ದುರ್ಗ ದುರ್ಗಾ ।
ಶ್ರೀರಮಣನೆ ನಿನ್ನ ಚರಣಕ್ಕೆ ಎನ್ನಯ ।
ಕೊರಳಿಗೆ ಕಟ್ಟಿದೆನೊ ಬಿಡಸಲ್ಲದೊ ।
ತೋರಿದ ಮೇಲಿನ್ನು ವಾಸುದೇವ ವಿಠಲ ।
ಭಾರ ಕರ್ತೃವೆ ಎನ್ನ ಕೈ ಪಿಡಿಯೊ ॥ ೧ ॥

ಮಟ್ಟ ತಾಳ

ನಿನಗಾರೆದರಿಲ್ಲ ಎನಗನ್ಯ ಗತಿಯಿಲ್ಲ ।
ಮನವಂಜಿಸುತಿದೆ ಹರಕು ದುರಿತವೊ ।
ಮನದಲ್ಲಿ ತನುವಿಲಿ ನೀನೇವೆ ಚನ್ನಾಗಿ ।
ಘನ ಧೈರ್ಯವನೀಯೋ ವಾಸುದೇವ ವಿಠಲ ॥ ೨ ॥

ರೂಪಕ ತಾಳ

ಎನ್ನಪರಾಧಗಳೆಣಿಸೆನಂದರೆ ಅದರ ।
ಕೊನೆಯಿಲ್ಲ ಮೊದಲಿಲ್ಲ ಹುರುಳಿಲ್ಲವೊ ।
ಕ್ಷಣ ಕ್ಷಣಕ್ಕೊ ಸ ಪರಿ ಮಾಡುವೆನಲ್ಲದೆ ।
ಅನುತಾಪ ಇನಿತಿನ್ನ ಬಡಬಲ್ಲಿನೆ ।
ನಾನು ನಿನ್ನಯು ಪಾದ ನೆನೆಯುದೆ ಪೋದೆನೊ ।
ಮನುಜ ಪಶು ಎಂದು ಎನ್ನಲ್ಲಿ ದಯ ಮಾಡೊ ।

ಅನಿಮಿತ್ಯ ಬಂಧು ವಾಸುದೇವ ವಿಠಲರೇಯಾ ॥ ೩ ॥

ಝಂಪಿ ತಾಳ

ಎನ್ನಯ ಸಾಧನ ಕಾಲ ನಾ ಬಲ್ಲೆನೆ ।
ಉನ್ನತ ಫಲವು ತಿಳಿಯಲೀ ಒಲ್ಲೆನೆ ।
ಮುನ್ನೆ ಬಾಹುವ ಮಾರಿ ಹಾರ್ದ್ದೊಡಿಯುಬಲ್ಲೆನೆ ।
ಪೂರ್ಣ ಮತ್ತ್ಯಾಗವ-ವ ಮತ್ತೊಮ್ಮೆ ಮತ್ತೊಮ್ಮೆ ।
ಚನ್ನಾಗಿ ಪೇಳುವೆನೆಂಬೊದೊಂದೂ ।
ಮನ್ನದಾಸಿಯು ವಾಸುದೇವ ವಿಠಲರೇಯು ।
ಬಿನ್ನಪವ ಲಾಲಿಸೊ ಕರುಣ ಸಿಂಧೊ ॥ ೪ ॥

ತ್ರಿವಿಡಿ ತಾಳ

ಎನ್ನಯ ಆಯುಷ್ಯ ಬೆಳಸಲಿ ಬಲ್ಲಿನೆ ।
ಉನ್ನತ ಸಾಧನ ಮಾಡುವೇನೆ ।
ಘನ್ನ ದಯಾನಿಧೆ ನೀನೆವೆ ಎನ್ನಲ್ಲಿ ।
ಸನ್ನದ್ಧ್ಯ ನಾಗೆನ್ನ ಸಲಹ ಬೇಕೊ ।
ಚಿನ್ನರ ಛಲವನ್ನು ಗೆಲಿಪರೊ ಪಿರಿಯರು ।
ಚಿನ್ನರೊಳಗೆ ಮೊದಲಿಗನೊ ನಾನೊ ।
ನಿನ್ನಮನಕ ತಂದು ಛಲವಗೆಲಿಸಬೇಕು ।
ಅನ್ಯನೆ ನಾ ವಾಸುದೇವ ವಿಟ್ಠಲರೇಯಾ ॥ ೫ ॥

ಅಟ್ಟತಾಳ

ಮೊದಲು ಮೃಕಂಡು ಸುತ ತನ್ನಾಯುವಿಗೆ ನಿನ್ನ ।
ಪದರಕ್ಕೆ ಬೀಳಲು ಆ ತನ್ನ ಬಹುಕಾಲ ।
ಬದುಕಿಸಲಿಲ್ಲವೆ ಗುರುಸುತ ಯಮಪುರಕೆ ।
ಪೋದನ್ನ ತರಲಿಲ್ಲೆ ಕಸಿಪು (ಸಿಪಿಸುತ) ಸುತ ನಿಮಿತ್ತ ।
ಕೊನ್ನದಗಿ ಬರಲಿಲ್ಲೆ ವಿಧಿ ಅಸ್ತ್ರವನು ನೀ ।
ಒದೆದು ಪೊರಿಯಲಿಲ್ಲೆ ಪರಿಕ್ಷಿತುವಿನ ಸ್ವಾಮಿ ।
ಎದಿರಾರೊ ನಿನಗಿನ್ನು ಎನಗೆ ನುಡಿದ ಮಾತು ।

ಬಿಡೆಲೊಾಡದಿರೊ ವಾಸುದೇವ ವಿಠಲರೇಯಾ ।
ಸದಮಲ ದಯ ಪೂರ್ಣ ಪೊರೆಯಬೇಕೆನ್ನ || ೬ ||

ಆದಿತಾಳ

ಕಾಲ ಕಲಿಯುಗ ಕೇಳುವರೆ ಇಲ್ಲ ।
ಕೀಳು ಜನರುಗಳು ತಾಳರೊ ಧರ್ಮವ ।
ಬಾಳುವೆ ನೆನಿತೊ ನೀ ಕೇಳದಿದ್ದರೆ ಕೃಷ್ಣ ।
ವೇಳ್ಯೆ ವೇಳ್ಯೆಗೆ ದಯಾಳೆ ನಂಬಿದೆ ನಿನ್ನ ।
ಧಾಳಿಯ ಮಾರಿಯನ್ನು ಸೀಳಿ ಮೊರೆಯನ್ನು ।
ಕೇಳಿ ನಿನ್ನಯಪದ ಧೂಳಿ ಆ ಎನ್ನಯ ಮನ ಭೂ ।
ಷಣಮಾಡಿ (ಎನ್ನವಯವತಾಳಿ ಭೂಷಣ ಮಾಡಿ) ಬಾಳಿಸು
ಬಹುಕಾಲ ವಾಸುದೇವ ವಿಠಲ || ೭ ||

ಜತೆ

ನೀನೆ ದಯಾ ಸಿಂಧೊ ಆನೇನು ಬೇಡೋದು ।
ದಾನಿಗಳರಸ ವಾಸುದೇವ ವಿಠಲರೇಯಾ || ೮ ||

## ವರಹದೇವರ ಸುಳಾದಿ ೯

ರಾಗ ಭೈರವಿ ಧ್ರುವ ತಾಳ

ಹರಿಯ ಆಜ್ಞದಿಂದ ಈರೇಳು ಲೋಕವ ।
ಸೃಜಿಸಿ ತಾ ಮನದಿಂದ ಕೆಲವು ಜನರುಗಳ ।
ಥರವಲ್ಲ ಇದರಿಂದ ತನುವಿಂದ ಸೃಜಿಸುವ ಜ ।
ನರು ಬಹಳವಾಗ ಆಹರೆಂದು ।
ಹಿರಣ್ಯ ಗರ್ಭನು ಮನು ಮೊದಲಾದವರ ಸೃಜಿಸಿ ।
ವರ ಬಹು ಸಂತತಿಂದ ಜಗವ ಪೂರೈಸೆನ್ನ ।
ಧರಿಯು ನೀರೊಳು ಮುಣಗಿ ಪೋಯಿತೊ ನಾ ಹ್ಯಾಗೆ ।
ಸೃಜಿಸು ಬಗೆ ಎನ್ನೆ ಬ್ರಹ್ಮನು ಚಿಂತಿಸೆ ।
ವರಹ ರೂಪದಿ ನಾಸಾ ಪುಟದಿಂದ ಪುಟ್ಟೆದಂಥ ।
ಪರ ವಾಸುದೇವ ವಿಠಲ ಪರಗತಿ ಎನಗೆ || ೧ ||

ಮಟ್ಟ ತಾಳ

ಸುರರು ನೋಡಲು ನೋಡೆ ಮರಗಿರಿ ಎಂತಾಗೆ ।
ತರಲು ಧರೆಯು ಪೋದ ನೀರೊಳು ಪಾತಾಳ ।
ಧರಿಯಲ್ಲಿ ಇದ್ದಂಥ ಧರೆಯನು ತರುತಿರಲು ।
ದುರುಳ ಹಿರಣ್ಯಾಕ್ಷ ಕರೆಕರೆ ಮಾಡಿದ್ದು ।
ಸರಕು ಮಾಡದೆ ದೇವ ಧರೆಯ ತಡೆಯಲಿದ್ದ ।
ತಿರುಗಿ ಎದುರಾಗಿ ದುರುಳನ ಶಿರವನ್ನು ।
ವರಸಿದ ಕೋರ್ದಾಡೆ ಕ್ಷುರದಿ ದಿತಿಜನ್ನೆರಿ ।
ವರ ವಾಸುದೇವ ವಿಠಲಪುರನೆಂದು ಸಾರಿಕೊ ॥ ೨ ॥

ತ್ರಿವಿಡಿ ತಾಳ

ಸೀಟಾದ ಮೊನೆಯುಳ್ಳ ಸಟೆಯದಟೆತಗ್ರೀವ ।
ಹಾಟಕ ನಯನನ ರಕುತಯುಕುತ ।
ಮಾಟಾದ ದಾಡೇಲಿ ನೀರೊಳು ವಿಹರಿಸಿ ।
ಊಟ ನೀರನು ಮಾಡೆ ಮ್ಯಾಲುಗಳೆ ತೊಯಿದು ।
ಈಟ ಮೊನಿಗಳೆಮ್ಮ ತಗಲವೊ ಎಂತೆಂದು ।
(ಕೋಟಿ) ಕೂಟ ಕಟ್ಟಿದರ್ಜ (ದರ್ ಜನ) ನ ಜನೋ
ಲೋಕದಿ ಜನರು ।
ಆಟದಿ ಪುಚ್ಛವನು ನೆಗೆಹಿ ನೀರನು ಬಡದು ।
ಓಟ ಓಡುವ ರಭಸ ತಾಳದೆ ಜಲಧಿಯು ।
ಚಾಟೆಂದು ಲಯದ ಕೃಪೀಠಯೋನಿಯು ಬಂತು ।
ಮೂಟ ಕಟ್ಟಿಕೊಂಡು ಮೊರೆಯೊಕ್ಕಕಿಟಗೆ ।
ನೀಟಿಸಿ ಸಮಯವ ಕುಸುಮ ವೃಷ್ಟಿಗಳನ್ನು ।
ಪಾಟಿಸಿದರು ಸುರರು ವಾಸುದೇವ ವಿಟ್ಠಲಂಗೆ ॥ ೩ ॥

ಅಟ್ಟ ತಾಳ

ಕಿರಿ ಕಿರಿ ಕಿರಿ ಎಂದು ಧರೆಯು ಮೊಗವ ನೋಡಿ ।
ಅದ್ರಿಧರ ಧರನಾಗಿ ಸುರರಿಗೆ ಅಭಯವ ।

ವರವ ಕೊಡುವೆನೆಂದು ಸ್ಥಿರವಾಗಿ ನಿಂತನ್ನ ।
ಚರಣ ಸಮೀಪಕ್ಕೆ ಸುರರು ಸುಖದಿ ಬಂದು ।
ಪರಿ ಪರಿ ಕೊಂಡಾಡೆ ವರ ವಾಸುದೇವ
ವಿಟ್ಠಲವೊಲಿವನಾಗೆ ॥ ೪ ॥

ಆದಿ ತಾಳ

ಹಿರಣ್ಯಕ ನಯನನ ಮಶ್ರ್ರಣ ಪೂಸಿದದಾಡೆ ।
ವರಸಿಕೊ ಅಂಜುವೆ ಮುದ್ದಾಡಲಿ ಬೇಡ ।
ಪರಮ ಕೃಪೆಯಿಂದ ನೋಡಿದರೆ ಸಾಕೊ ।
ವರವೀವೊ ಎಂದರೆ ಧರೆಯು ನೋಡುವದ್ಯಾಕೆ ।
ವರವೀವೊ ಅವರೆಲ್ಲ ಸತಿಯು ಕೇಳುವರೇನೊ ।
ಧರೆಯು ನಗುತಾಳೆ ಕರದು ಬಿಡಸಲ್ಲ ।
ವರವೀಯೊ ವಾಸುದೇವ ವಿಟ್ಠಲಕೋಲಾ ॥ ೫ ॥

ಜತೆ

ಮರಿಯದ್ಯಾಗೆ ಮಾಡೊ ವಾಸುದೇವ ವಿಠಲ ।
ವೊರೆ ಇಡುವೆ ಇದೆ ಒಡೆಯು ಕೋಲಾ ॥ ೬ ॥

## ಸುಳಾದಿ ೧೦

ರಾಗ ಸಾರಂಗ ಧ್ರುವ ತಾಳ

ಬಾರದ ಮೊದಲಿನ್ನು ವಿಷಯ ಬಾರದಚಿಂತೆ ।
ಭರದಿಂದ ಮರದೆನೊ ಹರಿಯೆ ನಿನ್ನ ।
ಬೆರದ ವಿಷಯದ ಕಾಲದಲ್ಲಿ ಸಂಭೋಗ ಪರನಾಗಿ ।
ಮರದೆನೊ ಹರಿಯೆ ನಾನಿನ್ನ ಜರಿಯು ಆದಬಳಿಕ ।
ನಿರುತ ಆದರ ಶೋಕಾತುರನಾಗಿ ಮರದೆನೊ ಹರಿಯೆ ನಿನ್ನ ।
ಮೂರು ಸಮಯವಲ್ಲಿ ಹೀಗೆನ್ನ ಮರಿಸಲು ।
ಆರು ತೋರಿಸಬೇಕು ಖರೆ ಸ್ಮೃತಿ ಸಮಯ ।
ತರುಳನ್ನ ಆಲಾಪ ಮನಕೆ ತಂದೀಗಲು ।
ಕರುಣಿಸೊ ವಾಸುದೇವ ವಿಠ್ಠಲ ಸ್ವಾಮಿ ॥ ೧ ॥

ಮಟ್ಟ ತಾಳ

ಸ್ಮೃತಿಯಿಲ್ಲ ಸ್ಮೃತಿಯಿಲ್ಲ ಇನಿತೆಂಬ ।
ಸ್ಮೃತಿಮಾತ್ರ ಮತಿಯಲ್ಲಿ ನಟ್ಟದೆ ಇದಲ್ಲ ದಿನ್ನೊಂದು ।
ಗತಿಯಿಲ್ಲ ದೆನಗಿನ್ನು ಇದನೆ ಸಾಧನ ಮಾಡಿ ।
ಪತಿ ವಾಸುದೇವ ವಿಟ್ಠಲ ಸ್ಮೃತಿ ಕೊಡು ಎನಗೀಗ ॥ ೨ ॥

ತ್ರಿವಿಡಿತಾಳ

ಹಾನಿ ಲಾಭಗಳಿಗೆ ಚಪಲ ಚಿತ್ತನಾಗಿ ।
ಆನು ಮತ್ತಗಳನು ಕಾರಣ ತಿಳುವೆ ।
ನೀ ನಿದಾನ ನಿಖಿಳಕೆ ಎಂದು ಮರದಿನೊ ।
ಏನೊ ಮೋಹನ ಶಕುತಿ ನಿನಗೆ ಎನ್ನಲ್ಲಿ ।
ಆನು ಬೇಡಿ ಕೊಂಬೆ ಎಂದಿಗಾದರು ಇಂಥ ।
ಹೀನ ವಿಸ್ಮೃತಿ ವಲ್ಲೆ ವಾಸುದೇವ ವಿಟ್ಠಲ ॥ ೩ ॥

ಅಟ್ಟತಾಳ

ಮರಹುವ ವೈರಾಗ್ಯ ಮರಹುವ ಸೌಭಾಗ್ಯ ।
ಮರಹುವ ಭೋಗ ಮರಹುವ ತ್ಯಾಗ !
ಪರಿ ಪರಿ ಇತ್ತರು ಹರಿಯೆ ನಾನೊಲ್ಲೆ ನಿನ್ನ ।
ಚರಣದ ಸ್ಮೃತಿಯಿಂದ ಚಿರದ ಸಾಧನ ಕೊಡು ।
ಪರವಿಲ್ಲ ಎನಗಿನ್ನು ವಾಸುದೇವ ವಿಠಲ ॥ ೪ ॥

ಆದಿ ತಾಳ

ನೀ ಕೊಟ್ಟದ್ದದೆ ಲಾಭ ನೀನಿತ್ತದ್ದದೆ ಸೌಖ್ಯ ।
ನೀ ಮಾಡಿದದೆ ಶಿಕ್ಷ ನೀ ಕೂಡಿದದೆ ರಕ್ಷ ।
ನೀನೆ ಪರಗತಿ ನೀನೆ ಪರಮಾತ್ಮಾ ।
ನಿನ್ನಗಿಂದಾರಿಂದಾರೊ (ರೂಪ) ವಾಸುದೇವ ವಿಠಲ ॥ ೫ ॥

ಜತೆ

ಆನೊಂದನರಿಯೆನು ದೀನರ ಪಾಲಕ ।
ನೀನೆಂದು ಮೊರೆಹೊಕ್ಕೆ ವಾಸುದೇವ ವಿಠಲ ।

## ಸುಳಾದಿ ೧೧

ರಾಗ ಸಾರಂಗ ಧ್ರುವ ತಾಳ

ಬಿನ್ನಪವ ಮಾಡುವೆ ಯಜ್ಞ ಶ್ರೀನಿವಾಸ ।
ನಿನ್ನ ಶರಣಗೆ ಹಲವು ಹಂಬಲ ಸಲ್ಲ ।
ಇನ್ನು ತಾನೊಮ್ಮೊಮ್ಮೆ ಬಯಸಿದೇ ಭಕುತಿಗೆ ।
ಅನ್ಯಥಾವಾಗದಂತೆ ಬಯಸಿಕೊಳಲಿ ಮನ ।
ಚಿನ್ನರ್ಗೆ ಫಲವಿತ್ತೆ ಓದು ಪೇಳುವ ತೆರ ।
ಚನ್ನಾಗಿ ನೀನೆವೇ ಫಲವನ್ನುವೊಲಿದಿತ್ತ ।
ಮನ್ನೆ ವಾಕು (ಕಾ) ಆದರಿಸೊ ವಾಸುದೇವ ವಿಠಲ ॥ ೧ ॥

ಮಟ್ಟ ತಾಳ

ತೋಂಡರ ಮಾತುಗಳ ಪುಸಿಗೊಳಿಸಲಿ ಬೇಡ ।
ದಿಂಡೇರ ಕೈಯಿಂದ ನೋಯಗೊಳಿಸದಿರೋ ।
ಅಂಡಜವಾಹನ್ನ ಬಿರಿದು ನಿನ್ನದು ನೋಡು ।
ಕೊಂಡಾಡುವೆ ವಾಸುದೇವ ವಿಠಲರೇಯಾ ।
ತೋಂಡರ ಮಾತುಗಳ ಪುಸಿಗೊಳಿಸಲಿ ಬೇಡ । ॥ ೨ ॥

ತ್ರಿವಿಡಿ ತಾಳ

ಆವಾವ ಆಶ್ರಮುವನ್ನು ವೊಲಿದಿತ್ತು ನಿನೆವೇ ।
ಆವಾವ ಬಗೆಯಲ್ಲಿ ಸಾಧನ ಮಾಡಿಸೊ ।
ಆವಾವ ಬಗೆಯಲ್ಲಿ ಬಲ್ಲ ಸರ್ವಜ್ಞನೆ ।
ಆವಾವ ವಿಧದಿಂದ ಬಿನ್ನೈಪದೇನೆಲೊ ।
ಕಾವ ಕರುಣಿ ವಾಸುದೇವ ವಿಟ್ಠಲರೇಯಾ ।
ಆವಾವ ಬಗೆಗಳ ಬಿನ್ನೈಪದೇನಯ್ಯಾ ॥ ೩ ॥

ಅಟ್ಟ ತಾಳ

ಕೊಡಗೈಯ್ಯ ಧೊರೆ ಎಂದು ನಂಬಿಲ್ಲಿಗೆ ಬಂದ ।
ಬಡನಡವಳ ನೀನು ಕಡೆಗೆ ನೋಡುವರೇನೊ ।
ತೊಡರುಗಳಿದ್ದರು ಬಿಡಿಸುವ ಬಗೆ ಬಲ್ಲ್ಯೊ ।

ತಡೆಕೊಡುವ ದೋಷ ಒಡೆಯ ನಿನ್ನೆದುರಿಗೆ ।
ಅಡರಿ ನಿಲ್ಲುವದುಂಟೆ ಆವಾವ ಕಾಲಕ್ಕೆ ।
ಪೊಡವಿಯ ತಳದಲ್ಲಿ ಪುಟ್ಟಿ ಸಾಧನಗಳು ।
ಪಡಿಯಲಿ ಬೇಕೆಂಬ ಭಕುತ ಜನರುಗಳು ।
ಕಡಿಮೇನೊ ಅವರೊಶ ಮಾಡಿಸೊ ಭಕ್ತರ ।
ಭಿಡಿಯ ಬಿರುದಿನ ವಾಸುದೇವ ವಿಟ್ಠಲ ॥ ೪ ॥

ಆದಿ ತಾಳ

ಒಂದೊಂದು ಕೊಡಲು ಮತ್ತೊಂದು ಕೊಡಲಿ ಎಂದು ।
ಸಂದಣಿಸುತಲೀವ (ಷ್ಪ) ವಿಷಯುಗಳೊಂದು ।
ತಂದೆ ತಡಮಾಡಬೇಡವೊ ಆದರಿಂದ ।
ಒಂದೇ ಸಾಧನ ಬಹಳಾಗುವದೊ ।
ಇಂದಿರೇಶ ಬಯಸಿದೆ ನಿನ್ನಲ್ಲಿ ।
ಬಂದು ಒದಗಿಸೊ ವಾಸುದೇವ ವಿಠಲ ॥ ೫ ॥

ಜತೆ

ಕರಣಾಳು ಸ್ವಾತಂತ್ರ ವಾಸುದೇವ ವಿಠಲ ।
ಷರ್ವಜ್ಞ ನಿನಗೆ ಮೊರೆ ಇಡೊದಿದೆ ಚಿತ್ರಾ ॥ ೬ ॥

## ಸುಳಾದಿ ೧೨

ರಾಗ ಭೈರವಿ ಧ್ರುವ ತಾಳ

ಸಿರಿಯ ಪತಿಯೆ ನೀನು ಅಜನ ಪಿತನೊ ನೀನು ।
ಸುರ ರೊಡಿಯನು ನೀನು ಧೊರೆಗಳ ಧೊರೆ ನೀನು ।
ನರ ಭಕುತರೊಳು ಮರುಳ ಭಕುತ ನಾನು ।
ಪರಿ ಪಾಲಿಪದೆಂತೊ ಎನ್ನಾಳು ತನವನು ।
ಸುರರಾಳಿದ ಎನ್ನ ತಪ್ಪುಗಳೆಣಿಸಲು ।
ಕುರುಬನ ಮಡ್ಡತನ ಚತುರರೆಣಿಸಿದಂತೆ ।
ಮರುಳರಾದರು ಎಮ್ಮ ಡಿಂಗರಿಗರೆಂದು ।
ಪರಿಪಾಲಿಸಬೇಕೊ ವಾಸುದೇವ ವಿಠಲ ॥ ೧ ॥

ಮಟ್ಟತಾಳ

ಒಡೆಯ ಕ್ಷಮಿಸಿ ನೀ ಕೇಳಿದರಾಯಿತೆ ।
ನುಡಿಯ ಭಕುತನ್ನ ಅಪರಾಧಗಳು ।
ಒಡಿಯನು ಪಿಡಿದರೆ ನಡೆನುಡಿಗಳು ತಪ್ಪೆ ।
ಕಡೆ ಹಾಯುವದೆಂತೊ ಬಡ ಭಕುತರಗಳು ।
ಜಡ ಮತಿ ಜನರನ್ನ ಕಡುದಯದಿಂದಲ್ಲಿ ।
ಪಡಿಯ ಬೇಕು ವಾಸುದೇವ ವಿಠಲ ॥ ೨ ॥

ತ್ರಿವಿಡಿ ತಾಳ

ನಿನ್ನ ಭಕುತರ್ಗೆ ಬನ್ನ ಬರಲು ಉದಾ ।
ಸಿನ್ನ ಮಾಡಿದರೆಂಬಿ ಎನ್ನ ನಿರ್ದಯನೆಂದು ।
ಮುನ್ನಿದಾರೋ ಎಂಬಿ ನಿನ್ನಾರೊ ಬಾ ಎಂದರೊ ।
ಎನ್ನ ಗೊಡಿವೆ ಏನೊ ಎನ್ನ ಎನ್ನವ ನೆಂದೇ ।
ನಿನ್ನವರವರಲ್ಲಿ ಭಿಡಿಯು ಎನಗೆ ।
ಮುನ್ನೆ ಬೇಕಾದರೆ ಜನರ ವಿಷಯದಲ್ಲಿ ।
ಸನ್ನೆ ಮಾಡಿದರೆ (ಅದನೆ) ಆಂದಕೆ ನಾ ಪಿಡಿವೆನೊ ।
ನಿನ್ನ ಶರಣರಲ್ಲೆ ಬಿನ್ನಪ ಬಿಡಲೊಲ್ಲೆ ।
ಘನ್ನ ವಾಸುದೇವ ವಿಠಲ ತಿಳಿದುಕೊ ॥ ೩ ॥

ಅಟ್ಟತಾಳ

ಚಲಸಲು ತೃಣ ಸಹ ಶಕುತಿ ಎನಗಿಲ್ಲ ।
ಕಲಿಸಲು ಬಲ್ಲನೆ ವೇದಶಾಸ್ತ್ರಗಳನು ।
ಒಲಿಸಿ ನಿಲ್ಲಿಪಿನೆ ವಾದಿಗಳ ಸಭೆಗಳಲ್ಲಿ ।
ಒಲಿಯ ಲಾರಿಯೆ ನಿನ್ನ ಗುಣಗಣ ನಿಲಯನೆ ।
ನಿಲಿಸಿ ನಿನ್ನಯ ರೂಪ ನೀನೆವೆ ಮಾಡಿಪಿ ।
ಒಲಿಯೆ ಮಾತ್ರವನ್ನು ನೀನೆವೆ ವಿಧಿನಿಷೇಧಂಗಳ ।
ತಲಿಗೆ ಕಟ್ಟುವೆ ಎನ್ನ ನಿನಗಿದು ಉಚಿತವೆ ।
ಬಲಿಯ ಪಾಶದಿಂದ ಬಿಡಿಸಿದ ತ್ವರ ಎನ್ನ ।

ಕಲಿ ಬಾಧೆ ಪರಿಯಯ್ಯಾ ವಾಸುದೇವ ವಿಠಲ ॥ ೪ ॥

ಆದಿತಾಳ

ಸೂಚಿಸಿದೆ ನೀ ಮೊದಲೆನಗೆ ।
ಯೋಚಿಸಿ ನಿನ್ನಯ ವಿಸ್ಮೃತಿ ಮೊದಲಾದ ।
ನೀಚ ಗುಣಂಗಳ ಗಣಗಳು ಅದರೊಳು ।
ಚಾಚಲು ಕಾಮ್ಯಕೆ ಹಾನಿಯು ಇನಿತಿಲ್ಲ ।
ನೀ ಚಿತ್ತದಲ್ಲಿಡು ವಾಸುದೇವ ವಿಠಲ ॥ ॥

ಜತೆ

ನಿನ್ನ ಮರಹೆ ಮೃತ್ಯು ನಿನ್ನ ನೆನಹೆ ಜೀವ ।
ಧನ್ಯರಿಗಿದೆ ತತ್ವ ವಾಸುದೇವ ವಿಠಲ ॥ ॥

## ಸುಳಾದಿ ೧೩

ರಾಗ- ನಾಟ ಧ್ರುವ ತಾಳ

ಖಳಕುಲ ಮರ್ದನ ದೇವನೆ ।
ಇಳೆಯ ಭಾರವ ಇಳಿಸುವ ಸ್ವಾಮಿಯೆ ।
ತಿಳಿಸಿ ಸದ್ಧರ್ಮಗಳ ಸಾಧು ಜನರಲ್ಲಿ ।
ಉಳಿಸಿ ಸಲಹುವ ಧೊರೆಯು ನೀನಾಗಿರೇ ।
ತಿಳಿಸುವೆ ಈ ಕಾಲಸ್ಥಿತಿಯು ಮನಕೆ ತಂದು ।
ಉಳಿಸೊ ವಾಸುದೇವ ವಿಟ್ಠಲ ಧರ್ಮಗಳ ॥ ೧ ॥

ಮಟ್ಟ ತಾಳ

ದುರಳರು ಮೊದಲೀಗ ।
ಧರಣಿಯುನನನೊಬ್ಬ ತೆರಳಿ ದೇಶವು ತಿರಗಿ ।
ಪುರಗಳಳಿಸುವ ಉರಳಿಸುತ ಲೋಕ ।
ಶಿರಗಳ ಬಾಹನ್ನ ಮರಳಿ ಶ್ರೀ ವಾಸುದೇವವಿಟ್ಠಲ ವೀರನೆ ॥೨॥

ತ್ರಿವಿಡಿ ತಾಳ

ಒಂದಿಷ್ಟು ದಯವಿಲ್ಲ ಹೆಣ್ಣುಮಕ್ಕಳ ತನ್ನ ।
ಮಂದಿಗೆ ಕೊಟ್ಟೆನ್ನು ಜಾತಿಯು ಕೆಡಿಸುವ ।

ವಂದಿತ ಜನರನ್ನು ನಿಂದಿತರನು ಮಾಡಿ ।
ಕುಂದಿಸುವನ ಕೂಡಿ ಇಂದೆಮ್ಮ ಪೊರೆಯ್ಯೆಯ್ಯಾ ।
ತಂದೆ ವಾಸುದೇವ ವಿಟ್ಠಲರೇಯನೆ ।
ಎಂದೆಂದಿಗೆ ನಮ್ಮ ಪೊರೆವ ಧೊರಿಯೆ ನೀನು ॥ ೩ ॥

ಅಟ್ಟ ತಾಳ

ಶಿಶುವಿನ್ನ ಸ್ಥವಿರನ್ನ (ರಿತ) ಎನ್ನ ದ್ವಿಜರನ್ನ ।
ಪಶುವಿನ್ನ ಮೊದಲು ನೀ ಪೊರದೆ ವೊಬ್ಬಿಬ್ಬರ ।
ವಸುಮತಿ ತುತಿ ಇಷ್ಟು ಮೊರೆ ಇಡುತಿದೆ ಈಗೆ ।
ವಶರಾಗರೆ ದೇವ ಕಿವಿಯು ಕೇಳುವದಿಲ್ಲೆ ।
ಪುಸಿಯಾದರೆ ನಿನ್ನ ಬಿರಿದು ಯಾದವರನ್ನ ।
ಬಿಸಿಜ ನಯನ ವಾಸುದೇವ ವಿಟ್ಠಲ ಕಾಯೊ ॥ ೪ ॥

ಆದಿ ತಾಳ

ಕಾಲ ಕಾಮ ಕರ್ಮಗಳ ಬಿಡವೊ ।
ಪಾಲಿನ ನಿನಗೆ ಸಾಧಾರಣವೊ ।
ಪಾಲಿಪ ಜನರನ್ನ ಕಾಣದೆ ಜನರು ।
ಆಲಿವರಿವರು ಕರುಣಿಸೆ ನಿನ್ನ ।
ಪಾಲಿಗೆ ಕೀರುತಿ ವಾಸುದೇವ ವಿಟ್ಠಲ ॥ ೫ ॥

ಜತೆ

ಕಲಿಕಾಲವು ವೊತ್ತಿಸೆಲೊ ಭಕ್ತರ ನೋಡಿ ।
ಒಲಿದು ಪಾಲಿಸು ವಾಸುದೇವ ವಿಟ್ಠಲ ದೇವಾ ॥ ೬ ॥

## ಸುಳಾದಿ ೧೪

ರಾಗ ಭೈರವಿ ಧ್ರುವ ತಾಳ

ಎಂದಿಗೆ ದುರ್ವಿಷಯ (ಮೋಹೊ) ಹೇಯುತಿ ಮತಿಯುನ್ನು ।
ಇಂದಿರೇಶ ಎನಗೆ ಪುಟ್ಟುವದೊ ।
ಇಂದಿಗೂ ಪುಟ್ಟಲಿಲ್ಲ ಮುಂದೆನ್ನ ಗತಿಯೇನೊ ಮುಕುಂದನೆ ।
ಮುಂದಿಗೆ ಮಾತುರ ಉಪದೇಶ ಮಾಡುವೆ ।

ಒಂದು ಭಾರಿ ನಿನ್ನ ಧ್ಯಾನ ಮಾಡೆ ।
ಸುಂದರಿಯರ ಕಂಡು ಕುಂದಿದೆ ಮನದಲ್ಲಿ ।
ಸಂದು ಸಿಕ್ಕಲು ಸಾಂಕೇತವನು ಮಾಡದೆ ಬಿಡೆ ಬಿಡೆ ।
ಮುಂದೆನ್ನ ಚರಿಯವನ್ನು ವೃಂದಾರಕರು ಕಂಡು ।
ಛಂದದಿ ಕೈ ಹೊಡದು ನಗುತಿಹರೊ ।
ಮಂದರಧರ ಗೋವಿಂದ ಎನ್ನಯ ಬುದ್ಧಿ ।
ಅಂದದಿಂದಲಿ ತಿದ್ದೊ ವಂದಿಸುವೆ ।
ಕಂದರ್ಪ ನೈಯ್ಯಾನೆ ನೀನು ನಗಲಿ ಬೇಡ ।
ಎಂದಿಗಾದರು ಗತಿಯಾಗದಿನ್ನು ।
ಮುಂದಕ್ಕೆ ಬರಲಿ ಬಡವ ಇವನೆಂತೆಂದು ।
ತಂದೆ ಶ್ರೀ ವಾಸುದೇವ ವಿಟ್ಠಲ ದಯ ಮಾಡೊ ॥ ೧ ॥

ಮಟ್ಟ ತಾಳ

ತನ್ನ ಶಿಶು ವಿನ್ನು ತಪ್ಪು ಹೆಜ್ಜಿಗಳಿಡೆ ।
ಜನರು (ಚಿನ್ನರು) ನಗುವರೊ ಕೈಗಳ ಹೊಡೆದು ।
ಜನ್ನನಿಯು ತಾ ಕಂಡು ಚಿನ್ನರು ಹೋ ಎಂದು ।
ಬಣ್ಣಿಸಿ ತನಯನ್ನ ಉಣ್ಣಿಸಿ ನಡಿಸುವಳೋ ।
ಘನ್ನ ವಾಸುದೇವ ವಿಟ್ಠಲರೇಯಾ ।
ಎನ್ನ ಮನದ ನಡತಿಯನ್ನು ನೀನೆ ತಿದ್ದಲಿ ಬೇಕು ॥ ೨ ॥

ತ್ರಿವಿಡಿ ತಾಳ

ಧಾನ್ಯಂಗಳು ಸಂಗ್ರಹಿಸುವ ಜನರೆಲ್ಲ ।
ಚನ್ನಾಗಿ ಬಿಡುವರೊ ಜೊಳ್ಳು ಮಾತ್ರ ।
ಸಣ್ಣಾವು ಇವುಯೆಂದು ಧಾನ್ಯವು ಬಿಡುವದೆ ।
ಚಿನ್ನವಾರನು ತನ್ನ ಬಳಿಗೆ ಬಂದ ।
ಹೊನ್ನುಗಳೊಳಗೆ ಹಿತ್ತಾಳಿ ಬಿಡುವನು ।
ಬಣ್ಣದ ಕಡಿಮೆ ಹೊನ್ನುಗಳ ತಾ ಬಿಡುವನೆ ।
ಇನ್ನಿದು ತಿಳಿದು ಶ್ರೀ ದೇವಾ ನೀ ।

ಎನ್ನನ್ನು ಪ್ರಲ್ಹಾದಾದಿಕ ಭಕ್ತ ( ತೃಣಧಿಕ ಭಕ್ತ )
ಜೀವರೊಳಗೆ ।
ಎನ್ನ ಗಣಣೆ ಮಾಡಿ ತಕ್ಕದಾದರು ಸಾ ।
ಧನ್ನ ಮಾಡಿಸಬೇಕು ಬಿಡಸಲ್ಲದೊ ।
ಸನ್ನ್ಯಾಯ ಮೂರುತಿ ವಾಸುದೇವ ವಿಠಲ ।
ನಿನ್ನವನಿವನೆಂದು ಎನ್ನ ಸಲಹೊ ॥ ೩ ॥

ಅಟ್ಟ ತಾಳ

ತರುಳನ್ನ ಬಿನ್ನಪ ಮನಕೆ ತರಲಿ ಬೇಕು ।
ಶರಣೆಂದ ಜನರನ್ನ ಪೊರಿವಿಯೊ ನಿಶ್ಚಯ ।
ಪರಿಚಾರಕ ಜನರವರಿಗೆ ಬೇಕು ।
ಸುರರೊಡಿಯನೆ ದೇವ ನೀನು ಎನಗೆ ಈ ಪರಿ ಇನ್ನು ।
ಥರವಲ್ಲದಿದ್ದರಿ ಅವರವರ ಪಾದ ।
ಚರಣ ಸೇವಕ ಪಾದದಲ್ಲ್ಯಾದರು ಎನ್ನ ।
ಸ್ಥಿರ ಮಾಡೋ ಶ್ರೀ ವಾಸುದೇವ ವಿಠಲರೇಯಾ ॥ ೪ ॥

ಆದಿತಾಳ

ತನುವಿನ ಮನಸಿನ ಒಡೆಯನು ನೀನೆಂದು ।
ಮನಸಿಗೆ ಬಂದಂತೆ ವಚನಗಳಾಡುವೆ ।
ಮುನಿಸು ಮಾಡದೆ ನೀ ಕ್ಷಮೆ ಮಾಡಲಿ ಬೇಕು ।
ಕನಸಿಲಿ ಮನಸಿಲಿ ತನುವಿಲಿ ನಾ ಅನ್ಯ ।
ಜನರ ಸಂಗತಿ ವಲ್ಲೆ ವಾಸುದೇವ ವಿಟ್ಠಲ ॥ ೫ ॥

ಜತೆ

ದುರ್ವಿಷಯ ಬಿಡಿಸಿನ್ನು ವಾಸುದೇವ ವಿಟ್ಠಲ ।
ಸರ್ವ ಬಗೆಯಲಿ ಪೊರೆಯೊ ನಿನ್ನವನು ನಾನು ॥ ೬ ॥
( ಎನ್ನ ಭಾರವೊ ವಾಸುದೇವ ವಿಟ್ಠಲರೇಯ ।
ನಿನ್ನ ಕೂಡ ಅದೆ ವಿಜ್ಞಾಪನ ಮಾಡುವೆ ॥ )

## ಸುಳಾದಿ ೧೫

ವಾಸುದೇವ ವಿಠಲರ ಪುಸ್ತಕದಲ್ಲಿ ಅರ್ಥ ಇದೆ

ರಾಗ ಕಾಂಬೋದಿ ಧ್ರುವ ತಾಳ

ಮೂರೆರಡು ಭೂತಂಗಳ ಸ್ವರೂಪ ತಿಳಿವದು ।
ನಾರಾಯಣನ್ನ ಆಧೀನವಾಗಿ ಈ ಗುಣ ।
ತೋರುವೆ ಮುಂಚೆ ಆಕಾಶದ ಗುಣವನ್ನು ।
ಮಾರುತ ಪಂಚಪ್ರಾಣರಿಗೆ ಅವಕಾಶಪ್ರದವಾಗಿ ।
ಈರೈದು ಇಂದ್ರಿಯ ಮನಸಿಗೇ ನಾಡಿದ್ವಾರದಿ ।
ತೋರುವದಿನ್ನು ತಾನಾಶ್ರಯವಾಗೀ ।

ಶ್ಲೋಕ

ಭೂತಾನಾಛಿದ್ರದಾತ್ರುತ್ವಾಂ ।
ಬಹಿರಂತರಮೇವಚ ॥
ಪ್ರಾಣೇಂದ್ರಿಯಾತ್ಮಾದೃಷ್ಟಿತ್ವಂ ।
ನಭಸೋ ವೃತ್ತಿ ಲಕ್ಷಣಂ ॥
ಸಾರುವೆ ಆಕಾಶ ತನ್ಮಾತ್ರಾ ಲಕ್ಷಣವು ।
ತೋರೋದು ಮುಂಚೆ ಅರ್ಥಪ್ರತಿಪಾದಕತ್ವವಿನ್ನು ।
ಆರಿಗೆ ಸಾಕ್ಷಾತ್ಕಾರಾಗಿ ದೃಷ್ಟಾವಿನ್ನು ।
ದೂರವಲ್ಲವೊ ನಭಸ್ತನ್ಮಾತ್ರಿಯು ॥

ಶ್ಲೋಕ

ಅರ್ಥಾಶ್ರಯತ್ವಂ ಶಬ್ದಸ್ಯಾದೃಷ್ಟಾ
ದೃಷ್ಟಾತ್ವಲಿಂಗಂ ತ್ವಮೇವ ಚ ।
ತನ್ಮಾತ್ರಾಂ ತ್ವಂ ಚ ನಭಸೊ ।
ಲಕ್ಷಣಂ ಕವಯೋವಿದುಃ ॥

ಮಟ್ಟತಾಳ

ನೋಡು ವಾಯು ಭೂತ ಲಕ್ಷಣಗಳು ಇನ್ನು ।
ಓಡುವನ ಹಾಗೆ ಕುಪ್ಪೆ ಮಾಡುವಣ ।

ಮಾಡುವಣ ಸರ್ವಜ್ಞಾದಿ ಶುಭ ಪ್ರಾಪ್ತಿ ।
ನೀಡುವೊಣ ಸರ್ವಗಂಧ ಪುಷ್ಪಾದಿಗಳ ।
ಪಾಡುವರಿ ಗಾನಗಳು ಕಿವಿಗೆ ತಂದೀವ್ರೋಣ ।
ನೋಡು ಇಂದ್ರಿಯಗಳಿಗೆ ನಿಯಾಮಕತ್ವವು ।
ಆಡು ಮತ್ತೆ ಎರಡು ವ್ಯಾಪಾರಂಗಳ ।
ಮಾಡಿಪನಾಹಂಕಾರ ಪ್ರಾಣಸೂತ್ರ ನಾನು ।
ಕೂಡಿವರಿಬ್ಬರು ಲಕ್ಷಣ ನಿಯಾಮಕರು ।

ಶ್ಲೋಕ

ಚಲನಂ ವಿಹ್ವನಂ ಪ್ರಾಪ್ತಿ । ನೇತೃತ್ವಂ ಪ್ರವ್ಯ ।
ಶಬ್ದಯೊ । ಸರ್ವೇಂದ್ರಿಯಾಣಾಮಾತ್ಮತ್ವಂ ।
ವಾಯೊ ಕರ್ಮಾಭಿಲಕ್ಷಣಾ । ( ಅಪೂರ್ಣ )

## ಗುರು ವಾಸುದೇವ ವಿಠಲರ

### ಸುಳಾದಿ (೧) ೧೬

ರಾಗ ಸೌರಾಷ್ಟ್ರ ಧ್ರುವ ತಾಳ

ಹಿರಿಯರು ಇಲ್ಲದ ಸ್ವರಿಣಿ ಏನಯ್ಯಾ ।
ನರರ ನೀ ಕಾಡಿಸುತ ಸುರತಿ ಇಚ್ಛೆಯಿಂದಲಿ ।
ನರಸಿಂಹನೆಂದು ನಿನ್ನ ಚರಣವ ಐವಲು ।
ಪರಿಹರಿಸಿದಂತೆ ನೀ ಈ ಪರಿ ಮುನಿವರೆ ।
ನರ-ನಾರಾಯಣ ರೂಪಿಯೋ ಅರಸಿ ಇಂದಿರೆಯಾಗೆ ।
ಸುರ ನಾರಿಯರು ಸೇವೆ ಚರಿಪರು ಆಗಿರೆ ।
ಗುರು ವಾಸುದೇವ ವಿಟ್ಠಲ ।
ಸರಳಾದ ಎನ್ನನು ಪರೀಕ್ಷಿಸಬೇಕಂತ ಈ ।
ಪರಿ ಮುನಿದೆಯ್ಯಾ । ॥ ೧ ॥

ಮಟ್ಟತಾಳ

ಗೋಪ ಜಟರು ನಿನ್ನ ಎಲ ಕೃಷ್ಣನೆನಬಹುದೆ ।
ಶ್ರೀಪತಿ ಅಸುರರು ಹಳಿಯೆಂದು ಬೈಬಹುದೆ ।

ಕೋಪವ್ಯಾತಕ್ಕಯ್ಯಾ ಭಕ್ತಪ್ರೋತನು ಬೈಯ್ಯೋ ।
ಕೋಪವಳಿದು ಕಾಯೊ ಗುರು ವಾಸುದೇವ ವಿಟ್ಠಲ । ॥ ೨ ॥

ರೂಪಕ ತಾಳ

ಮನದಾಸೆ ಮನೋವೇಗದಿಂದ ಮೀರುತಲಿದೆ ।
ತನುವಿನ ಸಾಧನ ಇನಿತಾದರು ಇಲ್ಲ ।
ಬಿನಗು ವಿಷಯಗಳಲ್ಲೆರಗಿ ಇಂದ್ರಿಯಗಳು ।
ಮನದಿಂ ಕೂಡಿ ಎನ್ನ ಕೆಡವಂತೆ ನಡಿಯೇ ।
ಉನ್ಮತ್ತರೊಳಗೆನ್ನಗಧಿಕರು ಇಲ್ಲರೊ ।
ಸನ್ಮತ ತೋರೋರು ನಿನಗನ್ಯರಿಲ್ಲರೊ ।
ಎನ್ನ ಉನ್ಮತ್ತತೆ ಕೇಳಿ ಹಿರಿಯರಿಂದ ।
ಸನ್ಮತ ಪೇಳಿ ಗುರು ವಾಸುದೇವ ವಿಟ್ಠಲ । ॥ ೩ ॥

ಝಂಪೆ ತಾಳ

ಕಡು ಕೋಪದಿಂದಲಿ ತಡಿಯದೆ ಎದುರಾಗಿ ।
ದಡವ ಮೀರಿದೆ ವಾರ್ಧಿಯಂತೇರಿ ಬರಲು ।
ಪುಂಡರೀಕಾಕ್ಷನೆ ಪಂಡಿತರರಸನೆ ।
ಖಂಡಿತ ವ್ರತನೊ ನಾ ಎನ್ನ ಕಾಯುನದಲೆ ।
ಉಡಗಿದ ಸ್ಮೃತಿಯಿಂದ ಬಡಬಡ ಬೈದೆನೊ ।
ಬಡವಳ ಕಾಯೊ ಗುರು ವಾಸುದೇವ ವಿಟ್ಠಲ ॥ ೪ ॥

ತ್ರಿವಿಡಿ ತಾಳ

ದಿತಿಯ ಸುತನು ನೀನು ಶ್ರುತಿಗೆ ಅವಾಚ್ಯನೆಂದು ।
ಮತಿಯ ಪುಟ್ಟಿಸದೆಳೆಸುತ ಪ್ರಲ್ಹಾದಂಗೆ ।
ಅತಿ ಕೋಪ ನೀನಾಗಾದಿತಿಜಗೆ ಮಾಳ್ಪದು ।
ದುಚಿತವೈಯ್ಯಾ ಎನ್ನಲ್ಲಿ ಅತಿಶಯ ತೋರುತಿದೆ ।
ಗತಿ ಏನೊ ಗತಿ ಏನೊ ಸತತ ಶ್ರುತಿವಂದಿತ ।
ಮತಿಹೀನಳಾದಂಗೆ ಗುರು ವಾಸುದೇವ ವಿಠಲ ॥ ೫ ॥

### ಅಟ್ಟತಾಳ

ಅಪರಾಧಿಗಳಲ್ಲತ್ಯಪರಾಧಿಯೊ ನಾನು ।
ಹೆಪ್ಪತ್ತಿನರಸಿಂಗ ಪಾದ ಭಜಿಸ ಪೋದೆ ।
ಅಪರಿಮಿತ ಧರಿಗೇವೆ ಅಲ್ಲೆ ಶಕ್ತಿ ।
ಇಪ್ಪದೊ ಗುರು ವಾಸುದೇವ ವಿಟ್ಠಲ ಭಕ್ತರ್ಗೆ ॥ ೬ ॥

### ಆದಿತಾಳ

ಸುಂದರ ವಾದ ಸುಂದರ ಪಾದ ।
ಸುಂದರ ಮುಖ ಸುಂದರ ನಖ ।
ಸುಂದರ ಹನು (ಹಾನು) ಸುಂದರ ಜಾನು ।
ಸುಂದರ ಕರ್ನಾ ಸುಂದರ ಶ್ರೋಣಿ ।
ಸುಂದರ ಅಧರ ಸುಂದರ ಉದರ ।
ಸುಂದರ ಹುಬ್ಬು ಸುಂದರ ನಾಭಿ ।
ಸುಂದರ ಸ್ಮಯಾ ಸುಂದರ ಹೃದಯಾ ।
ಸುಂದರ ಕಣ್ಣು ಸುಂದರ ಪಾಣಿ ।
ಸುಂದರ ಫಾಲಾ ಸುಂದರುಗಳಾ ।
ಸುಂದರ ಅಂಸಾ ಸುಂದರ ನಾಸಾ ।
ಸುಂದರ ಗುರು ವಾಸುದೇವ ವಿಟ್ಠಲ ।
ಕುಂದದೆ ಕೂಡಿ ಮುನಿಯಲು ಬಹುದೆ ॥ ೭ ॥

### ಜತೆ

ಆನು ನಿನ್ನಯ ಪಾದ ಮುನಿದರೆ ಬಿಡೆನಯ್ಯಾ ।
ದೀನ ರಕ್ಷಕ ಗುರು ವಾಸುದೇವ ವಿಟ್ಠಲ ॥ ೮ ॥

---

*

ಹರಿಃ ಓಂ

# ಶ್ರೀ ವಾಸುದೇವ ವಿಟ್ಠಲರ ಪದಗಳು

## ಗುರು ಕರುಣ ವಿರೆ ಕಲ್ಲ್ಯಾದಿ ಬಾಧೆಯಾಗದು

ಪದ ೧ ರಾಗ- ಪೂರ್ವಿ ಆದಿ ತಾಳ

ಗುರುಗಳ ಕರುಣ ವಿದು ।
ಇರುಳು ಹಗಲು ಹರಿಸ್ಮರಣೆ ಯೊಳಿರುವದು ॥ ಪಲ್ಲ ॥
ಕಲಿಯುಗ ಒದಗಿತಲ್ಲ ವಿಷಯದಿ ।
ಚಲಿಸಿತು ಮನವೆಲ್ಲ ।
ಇಳೆಯೊಳು ಹಿರಿಯರಿಲ್ಲಾ ।
ನೆರೆಜನ ಖಳರು ಸಜ್ಜನರೆಲ್ಲ ॥ ೧ ॥
ವೇದ ಓದುಗಳಿಲ್ಲಾ ಸುಮ್ಮನೆ ।
ಕಾದಿ ಕಾಲ ಕಳೆವರು (ಕಾದುವರು) ಕಂಡ್ಹಾಗೆ ॥
ಮೋದ ತೀರ್ಥರ ಮತ ಇದರೊಳು ।
ವ್ಪೋದಿ ಪೇಳುವರಿಲ್ಲ ॥ ೨ ॥
ಮೋಸ ಪೋಗದ ಹಾಗೆ ಹರಿಪದ ।
ದಾಸ್ಯವ ಬಿಡಧಾಗೆ ॥
ವಾಸುದೇವ ವಿಠಲನ್ನ ಕರುಣದಿ ।
ವಾಸರ ಕಳವದನೋ ನಮ್ಮ ॥ ೩ ॥

## ಶ್ರೀಗುರು ರಾಘವೇಂದ್ರರ ಸ್ತೋತ್ರ

ಪದ ೨ ಸಂಸ್ಕೃತ

ಶ್ರೀ ರಾಘವೇಂದ್ರ ತವಚರಣಂಭಜಾಮಿ ।
ಶರಣಾಗತ ಭವತರಣಂ ।
ಶ್ರೀ ಸುಧೀಂದ್ರ ಕರಕಂಜ ಸಂಭವಂ ।
ಸುಧಾಂಶು ಮುಖ ಸಂಸ್ತುತ ಭಾವಿಭವಂ ।

ಪಾವನ ವರಮಂತ್ರಾಲಯ ಸದನಂ ।
ಪತಿತ ಪಾವನಂ ಜಿತ ಮದನಂ ।
ವಾಸುದೇವ ಕವಿಸನ್ನುತ ಚರಣಂ ।
ಮೂಲರಾಮ ವರಕರುಣಾ ಭರಣಮ್ ॥ ೧ ॥

ಪದ ೩ ರಾಗ ಮುಖಾರಿ ಝಂಪಿ ತಾಳ

ನಾನ್ಯಾಕೆ ಚಿಂತಿಸಲಿ ನಾನ್ಯಾಕೆ ಧೇನಿಸಲಿ ।
ತಾನಾಗಿ ಶ್ರೀ ರಾಘವೇಂದ್ರಯತಿ ಒಲಿದ ॥ ಪಲ್ಲ ॥
ಪೋರತನದವನು ಎರಡು ಧೆರೆಗಳಲ್ಲಿ ।
ದೂರಾಗಿ ಮೊರೆಯು ಅಲ್ಲವೆಂದು ॥
ಕಾರಣ್ಯದಿಂದ ತಮ್ಮಯ ಗುರುತಗಳ ತೋರಿ ।
ಧೀರ ತಾ ಕರವನ್ನು ಪಿಡಿದ ಬಳಿಕಾ ॥ ೧ ॥
ಜಗದೊಳಗೆ ಪದಾರ್ಥಗಳು ಗುಣದಿ ಭುಂಜಿಸುವಂಗೆ ।
ಅಗದಂಕರನು ತಾನು ಬಳಿಗೆ ಬಂದು ।
ಬಗೆಬಗೆಯಿಂದಲ್ಲಿ ಸುರಸ ಪದಾರ್ಥಗಳು ।
ಸೊಗಸಾಗಿ ಉಣಿಸಲು ಚಿಂತೆಯುಂಟೆ ॥ ೨ ॥
ಪೂರ್ಣಜಲ ಹರಿವ ವಾಹಿನಿ ಕಂಡು ಬೆದರುವಗೆ ।
ಕರಣಧಾರನು ತಾನೆ ಬಂದು ನಿಂದು ।
ತ್ವರ್ಣದಲಿ ಕರಪಿಡಿದು ಹರಿಗೋಲು ವೊಳಗಿಟ್ಟು ।
ಘೂರ್ಣಿಸಲು ಅವನಿಗೆ ಚಿಂತೆಯುಂಟೆ ॥ ೩ ॥
ತನ್ನಯ ಹಿತವು ತಾ ವಿಚಾರಿಸಲವಂಗೆ ।
ಚೆನ್ನಾಗಿ ಪರಮ ಗುರು ತಾನೆ ಬಂದು ।
ಸನ್ಮಾರ್ಗವನು ತಾನೆ ಪೇಳುವೆನೆನಲು ।
ಇನ್ನು ಆಯಾಸವುಂಟೆ ॥ ೪ ॥
ಏಸು ಜನ್ಮದಲಿ ಅರ್ಚಿಸಿದೆನೊ ನಾ ಇನ್ನು ।
ವಾಸುದೇವ ವಿಟ್ಠಲ ಪಾದ ಪದುಮ ॥
ಲೇಸಾಗಿ ಈ ಸುಕೃತದಿಂದೆನ್ನ ಹರಿದಾಸ ।

ಈ ಸುಗುಣ ಗುರುರಾಯ ಎನಗೆ ಒಲಿದ ||೫||

ಪದ ೪ ರಾಗ ಯದುಕುಲ ಕಾಂಬೋದಿ ತ್ರಿವಿಡಿ ತಾಳ

ಮರವಾರೆ ಎನ್ನ ರಾಘವೇಂದ್ರ ಗುರುವೆ ಸಂಪನ್ನ |
ಕರದು ಕಾಮಿತಗಳ ಕರವೆ ನಾ ನಿನಗೆಂದು ||ಪಲ್ಲ||
ದಾರಿಯು ತಪ್ಪಿ-ಪೋಗುವ ಧೀರ ಪೋರನ್ನ |
ದಾರಿಯು ಪಿಡಿಸಿನ್ನು ಪುರವನ್ನೆ ತೋರಿಸೆ |
ಊರಿನವೊಳಗೆ ಆವನ ಆಗಾ ||
ದೂರ ನೋಡುವರೆ ದೋಷಗಳ ವಿಚಾರ ಮಾಡುವರೆ |
ಧೀರರು ಆವ ಪರಿಯುಲವನ ಪಾರಗಾಣಿಪರಲ್ಲದೆ ||೧||
ಹಸಿದು ಪರರ ಕೇಳದೆ ದ್ವಿಜವರಿಯನ್ನ |
ಶಿಶುವಿನ ನೋಡಿ ದಯದಿಂದ ಕರದಿನ್ನು |
ಹಸಿದ್ಯಾಕೊಯೆಂದು ಪಾಕವ ಮಾಡಿ ||
ಹಸನಾಗಿ ತಂದು ಬಡಿಸುವ ಅವಸರದಿ ನಿಂದು ಅವನ
ದೋಷ
ಪಸರಿಸಿ ಉಣಿಸಿದ ಜನರುಂಟೆ ಧರೆಯೊಳು ||೨||
ಜಲಪಾನಾತುರನಾಗಿ ಜಲವ ಕೇಳಿದ ವಿಪ್ರ |
ಕುಲತರುಳನನಳ ನೋಡಿ ಕೃಪೆಯಿಂದ ಸುರನದಿ |
ಜಲವನೀವೆನೆಂದು ಬ್ಯಾಗನೆ ದಿವ್ಯ |
ಕಲಶವ ತಂದು ಬಾರೆಲೊ ||
ಬಲು ಆಲಸ್ಯವ್ಯಾಕೆಂದು ನಿನ್ನಯ ಪಂಕ |
ತೊಳಿಯಕೊಡುವೆನೆಂದು ತಡವ ಮಾಡುವರೆ ||೩||
ಸುಶರೀರತನವನ್ನು ಮನದಲ್ಲಿ ಬಯಸಿ ತಾ |
ಉಸರದ ಮುನಿ ತನಯನ ಕಂಡು ತಾವಾಗಿ |
ಕುಶಲವು ಕೇಳಿ ದೇವತ ವೈದ್ಯ ||
ಅಸಮರೆಂಧೇಳಿ (ರಸ ಮಾಡೆಂಧೇಳಿ) ಅವಗೆ ದಿವ್ಯ |
ರಸವನ್ನು ಪೇಳಿ (ಪಸಿ) ನಿನ್ನಲಿದ್ದಾ |

ಕಿಸರು ಪೋದರೆ ಕೊಡುವೆವೆಂದು ನಿಲುವರೆ || ೪ ||
ಅರ್ತಿಯು ಭಕತನ್ನ ನೋಡೀಗ ನಿನ ದಿವ್ಯ |
ಕೀರ್ತಿಯು ನೋಡಿಕೊ ವಾಸುದೇವ ವಿಠಲನ |
ಮೂರ್ತಿಯು ಭಜಕ ಭಕ್ತರಾಭೀಷ್ಟ ||
ಪೂರ್ತಿಗೆ ಜನಕಾ ನಿನ್ನಯು ಗುಣ |
ಸ್ಫೂರ್ತಿ ಉಳ್ಳನಕ ಪಾಪದ ಲೇಶ |
ವಾರ್ತೆ ಎನಗೆ ಇಲ್ಲವೆಂದು ನಿಶ್ಚೈಸಿದೆ || ೫ ||

## ಶ್ರೀ ಜಯತೀರ್ಥರ ಸ್ತೋತ್ರಗಳು

ಪದ ೫ ರಾಗ ಭೈರವಿ ತ್ರಿವಿಡಿತಾಳ

ಸರಿಯಾರೈ ಜಯಮುನಿ ಸಮರ್ರ್ಯಾರೈ |
ಗುರು ಮಧ್ವಕೃತಿ ವಿವೃತಿ ರಚಿಸುವಲ್ಲಿ || ಪಲ್ಲ ||
ವರ್ನ ವಂದಾದರು ಬಿಡದಲೆ ಬಹು ಫಲ |
ವರ್ನಿಪೆ ಲೋಭದಿ ಶರಣ ಜನರಿಗೆ ||
ಕರ್ನ ಸುಧಾರಸ ಬೆರೆದು ನೀ ಬಲು ಗೂಢ |
ಪೂರ್ಣ ಮತಿ ಭಾವವ ತೆಗೆವತಿ ಶೂರ || ೧ ||
ಒಂದೊಂದು ವಚನವ ಹಿಂದಾಗಿ ಮುಂದಾಗಿ |
ಛಂದಾಗಿ ತಿರಿಗಿಸಿ ತಿರಿಯು ಸಿಂಧುರದಂತೆ ||
ಒಂದಿಸಿ ಮುಂದಾಗಿ ಬಂದುವಾರ್ದಿಯು |
ಸಂದುಗಳನೆ ಶೀಳಿ ಮೆರೆದತಿ ಶೂರ || ೨ ||
ಶಕ್ತಿಯು ಒಂದೇ ಹಿಡದೆ ಬಿಡದಲೇವೆ |
ಹತ್ತು ದಿಕ್ಕಿಗೆ ತಿರಿಗಿಪ್ಪ ವೀರನ ತೆರ |
ಆತ್ಯರ್ಥ ಮೂಲವ ಹಿಡಿದು ಆದರನ |
ಸುತ್ತಿಸಿ ವಿಮತರ ತತ್ತರಿಸುವ ಧೀರ || ೩ ||
ಮೂಲ ವಚನಗಳ ಕಲ್ಪಲತೆಯು ಮಾಡಿ |
ಮೇಲಾದ ತತ್ವಗಳೆಂಬೊ ಫಲಗಳು |
ಶೀಲ ಮತಿಗಳುಳ್ಳ ಶಿಷ್ಯ ಶಿಶುವಿಗಳಿ |

ಗಾಲಿಸಿ ಮೇಲಿಸುತ ಒಲಿಸುವ ಧೀರ || ೪ ||
ಅಕ್ಷೋಭ್ಯ ಮುನಿಗಳ ಪುಣ್ಯ ಫಲಗಳೆಂತೊ ।
ಋಕ್ಷುಗಣರ ಕರ್ಮ ಕಷ್ಟವೆ ಪೊದಗಿತು ।
ಈಕ್ಷೋಣಿ ತಳದಲ್ಲಿ ವಾಸುದೇವ ವಿಠಲನ ।
ಕಕ್ಷವ ಪೊಹಿಸಿ ಪುಟ್ಟಿದ್ಯೊ ಜಯರಾಯ || ೫ ||

ಪದ ೬ ರಾಗ ಜುಂಜೂಟ ಅಟ್ಟ ತಾಳ

ನೋಡು ನೋಡು ಟೀಕಾಚಾರ್ಯರ ।
ಮಾಡು ವಂದನೆಗಳ ಬೇಡು ವರಗಳನ್ನು || ಪಲ್ಲ ||
ದುರ್ಮಾಯಿ ಮತಗಳ ಮರ್ಮ ಭೇದಿಸಿ ಸುಧಾ ।
ನಿರ್ಮಾಣ ಮಾಡಿದ ಆರ್ಯರ || ೧ ||
ಲಲಿತೋರ್ಧ್ವ ಪುಂಡ್ರ ಶ್ರೀ ತುಲಸೀಭೂಷಿತ ಕರ್ಣ ।
ವಿಲಸಿತ ಕಾಷಾಯಧಾರ್ಯರಾ || ೨ ||
ಯಾವಾಗಲು ವಾಸುದೇವ ವಿಠಲನ್ನ ।
ಸೇವಿಸುವರ ಭಜಿಸುವರ || ೩ ||

ಪದ ೭ ರಾಗ ಭೈರವಿ ಝಂಪಿ ತಾಳ

ಜಯ ಮುನಿಯ ಭಜಿಸಿ ಸಿರಿ ಪತಿಯ ।
ದಯವ ಬಯಸುವ ಧೀರರು || ಪಲ್ಲ ||
ಒಂದೊಂದು ವಚನಗಳು ಗುರುತರಾ ।
ನಂದ ತೀರ್ಥರ ಭಾವಕೆ ।
ವಂದಿಸುದ ಜನರು ಬೇಡಿದ ಫಲಗಳಿಗೆ ।
ಮಂದಾರುತರು ಸನ್ನಿಭ ತಾವು || ೧ ||
ಹೊಂದಿಸುವ ಯುವತಿ ಬಾಣ ತಗೆಯಲವು ।
ಕುಂದಿಲ್ಲ ಧೀಷುಧಿಗಳು ।
ವಂದಿಸುವ ಶಿಷ್ಯರಿಗೆ ಹೃದಯದಲ್ಲಿ ।
ಕುಂದ ಕುಸುಮದ ಮಾಲಿಕೆ ತಾವು || ೨ ||
ಗೆಲಿಸಿ (ದು) ಪ್ರತಿವಾದಿಗಳ ಹೃದಯಗಿರಿ ।

ಕುಲಿಶಗಳಿಂತಿಹವೆ ।
ಫಲಿಸೊ ವಾಸುದೇವ ವಿಠಲನ ।
ಒಲಿ ಕೃಪೆಯೆಂದು ತಿಳಿಯೋ ಪ್ರಾಣಿ ॥ ೩ ॥

ಶ್ರೀಗುರು ರಾಜೋ ವಿಜಯತೇ

## ರುದ್ರದೇವರ ಸ್ತೋತ್ರ

ಪದ ೮ ರಾಗ ಕಾಂಬೋದಿ ಝಂಪಿ ತಾಳ

ದೇವತೆಗಳ ದೇವ ಮಹದೇವ ದೇವ ।
ಆವ ನಿಮಗೆ ಸರಿಯು ಕಾವುದೆಮ್ಮನು ಸರ್ವ ॥ ಪಲ್ಲ ॥
ಮೂರನೇ ತತ್ವದ ಒಡೆಯನು ನೀನಯ್ಯ ।
ಕಾರುಣಿಕ ಜನರಿಗಾರ್ಹ ಭಾವಕೆ ॥
ಮಾರರಮಣನಾ ನೆನೆದು ವೈಮರೆದು ಕುಣಿಯುವಿ ನೀ ।
ತಾರಕಾ ಉಪದೇಶಿ ಕಾಸಿ ವಾಸಿ ॥ ೧ ॥
ಗಂಗೆಯು ಧರಿಸಿ ನೀ ।
ಭಂಗಬಡುವ ಜನರ ಪೂತನ ಮಾಡಿದ್ಯೋ ॥
ಅಂಗಜನ್ನೈಯ್ಯನ ಭಕುತ ಶಿಖಾಮಣಿಯೆ ನಿ ।
ಸ್ಸಂಗ ಜನರ ಪ್ರೀಯ ಸನಕಾದಿ ವಂದ್ಯ ॥ ೨ ॥
ಮೋಸಗೊಳಿಸುವಿಯೊ ದುರ್ಜನರ ನಾನೀಶನೆಂದು ।
ವಾಸುದೇವ ವಿಠಲಗಲ್ಲದವರ ॥
ಲೇಸು ಬೋಧಿಸುವಿಯೊ ಯೋಗ್ಯರನು ನೋಡಿ ।
ಎನ್ನಯ ವಾಸ ಮಾಡೊ ಎನ್ನ ಮನದೊಡಿಯ ॥ ೩ ॥

## ಶ್ರೀ ಪ್ರಾಣದೇವರ ಸ್ತೋತ್ರಗಳು

ಪದ ೯ ರಾಗ ಕಾಂಬೋದಿ ಝಂಪಿ ತಾಳ

ಪ್ರಾಣನಾಥನೆ ನಿನ್ನ ತುತಿಯ ಮಾಡಲು ಇನ್ನು ।
ತ್ರಾಣ ಎನಗುಂಟೆ ಗುರುವೆ ॥ ಪಲ್ಲ ॥
ದಾನಿ ಸಿರಿಪತಿಯ ಭಕುತರ ಶಿಖಾಮಣಿಯೇ ಗುಣಶ್ರೇಣಿ ।
ಎಣೆಗಾಣೆ ಶ್ರುತಿಧಿ ಸ್ಮೃತಿಧಿ ॥ ಅನು ॥

ನಿಖಿಳ ಜೀವರಿಗೆ ಮಾನಿ ಪುರುಷ ನೀ ।
ಸಕಲ ಮಹದಾದಿ ಮಾನೀ ॥
ಸುಖರೂಪ ಪುರುಷನಿಗೆ ವಾಯುಅಗ್ನಿ ಆದಿತ್ಯ ।
ತೃಕುರೂಪ ಪುತ್ರನಾದೀ ಮೋದಿ ॥ ೧ ॥
ಕಮಠ ರೂಪದಿ ಲೋಕಕಾಧಾರಾ ।
ಸಮನೋ ಆಖಣಾತ್ಮನೇ ।
ಸಮಯ ಬಿಡಧಾಗೆ ಹೃದಯದಲ್ಲಿ ಎಚ್ಚರುನೆ ನಿಖಿಳ ।
ಸುಮನಸರನ್ನ ಪೊರವೇ ಬೆರವೇ ॥ ೨ ॥
ವಾಸುದೇವ ವಿಠಲನ್ನ ಸಂತತವು ।
ಶ್ವಾಸ ಮಂತ್ರದಿ ಸೇವನಾ ॥
ಲೇಸಾಗಿ ಮಾಡುವ ಜೀವರೊಳು ನೀನೇವೆ ।
ದಾಸನ್ನ ಪೊರೆಯೊ ಧೀರಾ ವೀರಾ ॥ ೩ ॥

ಪದ ೧೦ ರಾಗ ಮುಖಾರಿ ತ್ರಿವಿಡಿ ತಾಳ

ತಾವಲ್ಲಿ ನೆನೆಯಲು ದಶಮತಿ-ಗುರುಗಳು ।
ನಾವಿಲ್ಲಿ ಸುಖಿಗಳು ಸುಲಭದಿಂದ ॥ ಪಲ್ಲ ॥
ತುರು ಮಾಮರ ಮಣಿಯು ನೆನೆಯೆ ಕೂಸುಗಳಿನ್ನು ।
ಪೊರತಿ ಮನದೊಳಗಾಗುವಂತೆ ॥
ತಾರಾ ರಮಣನು ತಾ ಮ್ಯಾಲೆ ಉದಿಸಲು ।
ವಾರಿಧಿ ಹರುಷದಿ ಉಕ್ಕುವಂತೆ ॥ ೧ ॥
ತರಣಿ ಕಿರಣ ಪಸರಿಸೆ ಸರೋವರದಲ್ಲಿ ।
ಸರಸಿಜ ವಿಕಸಿತವಾಗುವಂತೆ ।
ವಾರಿದ ಮ್ಯಾಲಿರೆ ತಾ ನೋಡಿ ಮಯೂರ ।
ಮೊರಿ ಹರುಷದಿ ಕುಣಿ ಕುಣಿದಾಡುವಂತೆ ॥ ೨ ॥
ವ್ಯಾಸ ದೇವರ ಕೂಡ ಮಾತುಗಳಾಡುವಾಗ ।
ಲೇಸು ಶಿಷ್ಯರಿಗನ್ನೆ (ಗಿಂಥ) ಶುಭ ನಮಗೆ ॥
ವಾಸುದೇವ ವಿಠಲ ಪಾಶದಿಂದಾಡುವಾಗ ।

ವಾಸ ಅಕ್ಷಯವೆನ್ನಿ ಕೃಷ್ಣೆಯಂತೆ || ೩ ||

ಪದ ೧೧ ರಾಗ ನಾಟಿ ಅಟ್ಟ ತಾಳ

ಆನಂದತೀರ್ಥರ ಮತ ಪರಮು |
ಆನಂದ ಸಾಧನ ತಿಳಿ ಕಂಡ್ಯಾ ಮನವೆ || ಪಲ್ಲ ||
ಶಕುತಿಯು ಇದ್ದಷ್ಟು ತಿಳಿದು ಮತವು ಬಲು |
ಯುಕುತಿಯಿಂದಲಿ ನೀ ಒಲಿಸು ಕಂಡ್ಯ ||
ಭಕುತಿಯು ಗುರುಗಳ ಪದದಲಿ ಮಾಡಲು |
ಮುಕುತಿಯು ಕರವಶವಾಗುವದೊ ಸಿದ್ಧ || ೧ ||
ತಿಳಿಯದಿದ್ದರೆ ನೀನು ತಿಳಿದವರ ಬಳಿಯಲ್ಲಿ |
ಮಿಳಿತನಾಗಿ ಪೋಗಿ ತಿಳಿದುಕೊಳ್ಳೋ ||
ಖಳಜನ ಸಹವಾಸ ಕುಮತಗಳಭ್ಯಾಸ |
ಒಳಿತಲ್ಲವೊ ನಿನಗೆಂದಿಗನ್ನ || ೨ ||
ಪ್ರವಚನ ಮಾಡುವ ಬುಧಜನ ಪೇಳುವ ನುಡಿದಂಥ |
ಸುವಚನ ಕೇಳಿ ನೀ ಬದಕು ಕಂಡ್ಯಾ ||
ಕವಚವು ನಿನಗಿದು ಭವ ಭಳಿ ಬಾಧಿಗೆ |
ಪ್ರವಚನ ಬಾಹೋದೆಂದಿಗನ್ನ || ೩ ||
ಇದ್ದವರಿಗೆ ಕೊಟ್ಟು ಅವರ ಹಿಂದೆ ಇಷ್ಟು |
ಮೆದ್ದರೆ ಕೋಟಿ ಭೋಜನದ ಪುಣ್ಯ ||
ಗೆದ್ದರು ಇವರನ್ನ ನಂಬಿದ ಜನರು |
ಬಿದ್ದರು ದೂಷಕ ಜನ ತಮದಿ || ೪ ||
ಕಾಸು ವೀಸಕೆ ನೀನು ಮೋಸ (ಹೋಗಲಿ) ಗೊಳಲು ಬ್ಯಾಡ |
ತಾಸು ಘಳಿಗೆ ನೆಚ್ಚಲು (ನೀ ಚಲಿಸ) ಬೇಡ ||
ಏಸೇಸು ಸುಕೃತದಿ ದೊರಕಿತು ಈ ಮತ |
ವಾಸುದೇವ ವಿಠಲನ್ನ ಪಾಡೊ (ನೋಡೊ) || ೫ ||

ಪದ ೧೨ ರಾಗ ಸಾರಂಗ- ಆದಿತಾಳ

ಮನವೆ ಮಾನ್ಯನ ಮನ್ನಿಸು ಶ್ರೀವ್ಯಾಸಾ |

ಮುನಿಗೆ ಒಲಿದಿಹ ವಾಯುನಾ ॥ ಪಲ್ಲ ॥
ಪ್ರತಿ ಸಂಚರ ಕಾಲದಿ। ಅವಿಲೀನ ।
ಮತಿಯುಳ್ಳ ದೇವ ನಿವನೂ ॥
ಸುತ ಜಯಾ ದೇವಿಗೀತ ತನ್ನ ಸರಿ ।
**ಚತುರಾಸ್ಯ ದೇಹದೊಳಿಹ್ಯ** ॥ ೧ ॥
ಚತುರ ವಿಂಶತಿ ತತ್ವಕೆ ಅಭಿಮಾನಿ ।
ಶ್ರುತಿಗಳರಿಯದ ಗುಣಗಳ ॥
ಮತಿಯುಳ್ಳ ಸೂತ್ರನಾಮ ಹರಿರೂಪ ।
ಮಿತಿ ಇಲ್ಲದಲೆ ಕಾಂಬನೊ ॥ ೨ ॥
ಯತಿಯಾಗಿ ಬಂದು ಹರಿಯ ಕಾರ್ಯಗಳ ।
ಕೃತಿಸಿ ತಾ ನಿಂದು ವ್ಯಾಸ ॥
ವೃತಿಯಿಂದ ಮಾಡಿಸಿದ ಈತಗೆ ।
ಪತಿ ವಾಸುದೇವ ವಿಟ್ಠಲಾ ॥ ೩ ॥

## ಶ್ರೀ ಲಕ್ಷ್ಮೀದೇವಿಯರ ಸ್ತೋತ್ರ

ಪದ ೧೩ ಝಂಪಿ ತಾಳ

ಸಿರಿದೇವಿ ಹರಿಯ ದಯವು ಆವಾವ ।
ಪರಿಯೆ ಆ ಪರಿ ಪಾಲಿಸೆ ॥ ಪಲ್ಲ ॥
ಆಲದೆಲೆಯಲ್ಲಿ ಅಂದು ನಿನ್ನಯ ಮ್ಯಾಲೆ । ಮಲಗಿಪ್ಪ ಹರಿಯ ॥
ತೋಳು ಬಿಗಿದಾಲಂಗಿಸಿ-ಸೃಷ್ಟಿಯ ।
ಲೀಲೆಯನು ಮಾಡಿಸಿದ ತಾಯೆ ॥ ೧ ॥
ವಕ್ಷವಾಲಯ ಮಾಡಿದೆ ಆವಾಗ । ದಕ್ಷಣಾದೇವೆನಿಸಿದೆ ॥
ಲಕ್ಷವಿಲ್ಲದೆ ಭಾಗ್ಯವ ಭಕ್ತರಿಗೆ ।
ಅಕ್ಷಯ ಸಂಪದಳು ಕರುಣದ । ವಿಕ್ಷೆಯಿಂದಲ್ಲಿವೀವೆ ॥ ೨ ॥
ದೈವತಾ ಜನ ಸ್ತುತಿಪೆ (ಜನಿಸುತಿಪ್ಪೆ) ನೀ ಎನ್ನ ।
ಭಾವ ಹರಿಯಲಿ ನಿಲಿಸೆ ॥
ಕಾವ ಭಾರವು ನಿನ್ನದೇ ।

ಶ್ರೀ ವಾಸುದೇವ ವಿಠಲನ ರಾಣಿ || ೩ ||

ಪದ ೧೪ ಆದಿ ತಾಳ

ಪರಿಪೂರ್ಣ ಕಾಮೆ ಶ್ರೀ ರಮೆ || ಪಲ್ಲ ||
ಕಮಲದಳಾ ಸಮ ವಿಮಲ ಚರಣ ಯುಗೆ |
ಅಮಲಜಂಘಾನ್ವಿತೆ ಶುಭಗೆ || ೧ ||
ಇಭ ಕರ ಸದ್ಯೋ ಗುರು ಇಭ ರಿಪು ಸಮಕಟಿ |
ಶುಭತಮ ಶುಭತಮ ನಾದಿಸೂತ್ರಿವಳಿ || ೨ ||
ಗುರು (ಗ) ತತ ವಾಸುದೇವ ವಿಠಲ |
ಪರಮ ಪ್ರೀಯೋ ಭವ |
ಶರಧಿ ತಾರಕೆ ಚಂದ್ರ ಫಲಕೆ || ೩ ||

## ಐತಿಹಾಸಿಕ, ದುರ್ಗಾ ಸ್ತೋತ್ರ ಮಾಡಿ, ಬಂದ ಮಾರಿಕಾ ಉಪದ್ರ ಪರಿಹರಿಸಿದ್ದು

ಪದ ೧೫ ರಾಗ ಸಾರಂಗ ಆದಿ ತಾಳ

ಅಂಜಿಸುವದ್ಯಾಕಮ್ಮ ಕಂಜೋದ್ಭವ ನಮ್ಮ ನೀ |
ಅಂಜಿಸಿದರೆ ಲೋಕ ಅಂಜಾದಿರುವದೆ || ಪಲ್ಲ ||
ಕುಂಜರ ಗಮನೇ ನಾವಂಜನ ದೇವಿ |
ಸಂಜಾತನಾದ ಪ್ರಭಂಜನನನುಗರು ||
ಕಂಜಾನಾಭನ ಪಾದ ಕಂಜಾಕ್ಕೆ ವಿಮುಖ |
ಸಂಜಲಿ ಚರಿಸುವ ಪುಂಜರು ಕಡಿವೆ, || ೧ ||
ನಿನ್ನಾನೆ ನಂಬಿ ನಾವಿನ್ನು ಸಂಸೃತಿಯಾ |
ಬನ್ನಾವೆ ಕಳಕೊಂಡು ಚನ್ನಾಗಿ ಜಗದಿ ||
ಧನ್ನ್ಯಾರದೇವೆಂದು ಮನ್ನಾದ ಬಯುಸೆ |
ಅನ್ಯಾರಂದದಲೆ ನೀ ನಮ್ಮನ್ನ ನೋಡುವರೆ || ೨ ||
ಸಿರಿ ನಾರಸಿಂಹನ್ನ ವಗ ಭಕ್ತಿಯಲಿ ನೀವು |
ಕರವಶ ಮಾಡಿಪ್ಪೆ ಪರವೇನೆ ನಿನಗೆ ||

ಪರಮೇಷ್ಠಿ ಮೊದಲಾದಾಮರರಾ ನೀ ಪೊರವೆ ।
ಸಿರಿ ವಾಸುದೇವ ವಿಠಲನ್ನ ತೋರಮ್ಮ ॥ ೩ ॥

## ಶ್ರೀ ದುರ್ಗಾದೇವಿ ಸ್ತೋತ್ರ

ರಾಗ ಸಾವೇರಿ ಝಂಪಿ ತಾಳ

ಅಮ್ಮಾ ಅಮ್ಮೊಮ್ಮ ದುರ್ಗಮ್ಮ ಅಮ್ಮಾ ।
ನಿಮ್ಮ ಮಹಾ ಮಹಿಮೆಯನು ಸುಮ್ಮಗೆ ನಮ್ಮಾ ॥

( ಇಷ್ಟೇ ದೊರೆತದೆ )

## ಶ್ರೀ ದೇವರ ಸ್ತೋತ್ರ ಪದಗಳು

ಪದ ೧೬ ರಾಗ ತೋಡಿ ಆದಿ ತಾಳ

ಬಾರೋ ಬಾರೋ ಬಾರೋ ಹರಿ ।
ತೋರೋ ತೋರೋ ಮುಖವ ಧೊರಿ ॥ ಪಲ್ಲ ॥
ಧೀರನೆ ಬಹು ಗಂಭೀರನೆ ಗೋರಸ ।
ಚೋರನೆ ಗೋಪಿ ಜಾರನೆ ಬ್ಯಾಗನೆ ।
ವೀರಾಧಿವೀರನೆ ಎನ್ನ ವಾರೆ ನೋಟ ನೋಡುವರೆ ।
ಗಾರು ಮಾಡದಲೆ ಮನ ಸೇರಿ ಸುಖಬಡಿಸಲು ॥ ಅನ ಪ ॥
ಭೃಂಗಗಳ್ಯಾತಕ ಕೂಗಿದವೊ । ಅಂಗಜ ಶರಗಳು ಸೇರಿದವೊ ।
ರಂಗನೆ ಗರುಡ ತುರಂಗನೆ ವಿಧೃತ ರಥಾಂಗನೆ ಸಜ್ಜನ
ಸಂಗನೆ ಬ್ಯಾಗನೆ ।
ಮಂಗಳ ರೂಪನೆ ಬೆಳದಿಂಗಳೊಳು ನೀನು ಪಿ ।
ಳಂಗೊಳವಿನೂದಲು ಆ ರಂಗ ಎನ್ನ ಬಿಡಿಸಿದ ॥ ೧ ॥
ಕಾವಾರೆ ನಿನ್ಹೊರತಿನ್ನಾರೊ ।
ಭಾವಜಪಿತ ಮಂದಿರ ಸೇರೊ ।
ದೇವನೆ ಭಕುತರ ಕಾವನೆ ವರಗಳ ।
ನೀವನೆ ರಿಪುವನದಾವನೆ ಬ್ಯಾಗನೆ ॥
ದೇವಾದಿದೇವನೆ ಎನ್ನ ।
ಕಾವನು ನೀನಲ್ಲದೆ ಇ ।

ನ್ನಾಶ್ಯವನು ಈ ಭೂಮಿಯೊಳ ।
ಗೀವನು ಕಾಣೆನೊ ನಾನೊಬ್ಬ ॥ ೨ ॥
ಈ ಸಮಯದಿ ಪರಿಪಾಲಿಪರ‍್ಯಾರೋ ।
ವಾಸುದೇವ ವಿಟ್ಠಲ ನೀ ತೋರೊ ।
ಶ್ರೀಶನೆ ಸುಂದರ ಹಾಸನೆ ಮುನಿ ಮನ ।
ವಾಸನೆ ಶತರವಿ ಭಾಸನೆ ಬ್ಯಾಗನೆ ॥
ಹಾಸುಮಂಚದೊಳು ಹುವ್ವಿನ ।
ಹಾಸಿಕೆಯೊಳು ಮಲಗಿ ।
ಬ್ಯಾಸರಗೊಂಡೆನು ಪರಿ ।
ಹಾಸವ ಮಾಡದೇ ಬ್ಯಾಗ ॥ ೩ ॥

ಪದ ೧೭ ಆದಿತಾಳ

ಬಾರೋ ಬಾರೋ ಸುಂದರನೆ ।
ಬರ ಹೇಳಿದಳೊ ನಿನ್ನರಮಣಿ ॥ ಪಲ್ಲ ॥
ಶುಕಪಿಕರವದಿಂದ ವಿಕಳಿತಳಾಗಿ ಧೈರ‍್ಯ ॥
ಕಕವಿಕಳಾಗಿಹಳವಳು ನೀ ಬೇಗನೆ ॥ ೧ ॥
ಸಾರ ಸುಗುಣೆ ನಿನ್ನ ದಾರಿಯ ನೋಡಿ ನೋಡಿ ॥
ಸರಸಿಜ ಮುಖಿನೀ ಪೋಗಿ ಬಾರೆಂದಳು ॥ ೨ ॥
ಶ್ರೀ ವಾಸುದೇವ ವಿಠಲ ನಿನ್ನಯ ಸಖಿ ॥
ಭಾವಜನ ರೂಪವ ತೋರು ತೋರಿಸೆಂದಳು ॥ ೩ ॥

ಪದ ೧೮ ರಾಗ ಜುಂಜೂಟಿ ರೂಪಕತಾಳ

ಬಾರೊ ಬಾರೋ ಪ್ರಾಣಕಾಂತ ।
ತೋರೊ ಮುಖವ ನೋಡುವೆ ॥
ತೋರಿ ತೋರಿ ನಿನ್ನ ಪದ । ವಾರಿಜವ ನಂಬಿದೆ ॥ ಪಲ್ಲ ॥
ಭಾರಿ ಭಾರಿಗು ಮಾರ ಎನ್ನ । ಘೋರಿಸುತಿರುವನು ॥
ಗಾರು ಮಾಡಬೇಡ ಎನ್ನ । ಸೇರಿ ಆನಂದ ನೀಡೊ ॥ ೧ ॥
ಪಂಥ ಮಾಡಬೇಡ ಎನ್ನ । ಕಂತು ಜನಕ ಲಾಲಿಸೊ ॥

ಅಂತರಂಗದ ಬಾಧಿಗೆ ನಾ । ಚಿಂತೆ ಪಡುತಿರುವೆ ॥ ೨ ॥
ವಾಸುದೇವ ವಿಠಲ ನಿನ್ನ । ದಾಸಿಯುಲ್ಲವೆ ನಾನು ॥
ಆಶೆಯಿಂದ ಬಂದೆ ಪರಿ । ಹಾಸ ಮಾಡಬೇಡ ॥ ೩ ॥

ಪದ ೧೯ ರಾಗ ಪೀಲು ಆದಿತಾಳ

ಎಂದಿಗೆ ನಿನ್ನ ಪಾದ ಕಾಂಬೆ ಸ್ವಾಮಿ ।
ಎಂದಿಗೆ ನಿನ್ನ ಪಾದ ಕಾಂಬೆ ॥ ಪಲ್ಲ ॥
ಎಂದಿಗೆ ನಿನ್ನ ಪಾದ ಕಂಡೇ ಭಕುತಿಯಿಂದ ।
ಅಂದಿಗೆ ಭವ ಪಾಶತುಂಡೆ ಸ್ವಾಮಿ ॥ ಅನುಪಲ್ಲ ॥
ಇಂದಿರ ದೇವಿ ನಿನ್ನ ಹೊಂದಿದ್ದ ಕಾರಣ ।
ದಂದೂಗವನ್ನು (ದ್ವಂದ್ವೌಘ) ಕಾಣಲಿಲ್ಲ ಸ್ವಾಮಿ ॥ ೧ ॥
ಬೊಮ್ಮನು ನಿನ್ನ ಪಾದ ( ಮಗ ) ನಮ್ಮಿ ತುತಿಸುವ ( ವಾಗ ) ನಿನ್ನ ।
ಮೊಮ್ಮಗ ಕುಣಿ ಕುಣಿ ದಾಡುವ ॥ ೨ ॥
( ನಿನ್ನಾಣೆ (ನಿನ್ನನೆ) ವಾಸುದೇವ ವಿಟ್ಠಲಾ ಎನ್ನ । )
ಮುನ್ನಾದಿ ಭಜಿಪದ ಬಲ್ಲೆಲಾ ಸ್ವಾಮಿ ॥ ೩ ॥
( ಮುನ್ನಾದಿ ಬಯುಸದು ಕಾಣಿತೊ ರಂಗ । )

ಪದ ೨೦ ಅಟ್ಟ ತಾಳ

ನಂಬೋದ ಖರಿಯಾ ಶ್ರೀ ಹರಿಯಾ ಪಾದ ನಾ ।
ನಂಬೋದೆ ಖರಿಯಾ । ಅಂಬುಜಾಂಬಕ ತನ್ನ ನಂಬಿದ ಭಕತರ ।
ಇಂಬಾಗಿ ಪೊರೆದನೆಂತೆಂಬ ವಾರುತಿ ಕೇಳಿ ॥ ಪಲ್ಲ ॥
ದೂರವಾದರೆ ತಾನು ನಾರಿಯು ಮೊರೆ ಕೇಳಿ ।
ಚೀರಿ ಕರದಳೆಂದು ಶೀರಿಗಳನೆ ಇತ್ತು ।
ಮಿೂರಿ ಪೊರದನೆಂಬೊ ವಾರುತಿ ಜಗದೊಳು ಬೀರಿದನರಿಯಾ ।
ಬಿಂಕವ ಬಿಟ್ಟು ಸೇರಿಕೊ ಹರಿಯಾ ॥
ದಾರಿ ಕಾಣದೆ ವನ ಸೇರಿದ ಕುವರನ್ನ ।

ಸಾರಿಗೆರದು ಸೌಖ್ಯ ಪೂರೈಸಿದವನೆಂದು ॥ ೧ ॥
ಕಾಡಾನೆ ವ್ರಜದೊಳು ಕೂಡಿದ್ದ ಗಜರಾಜ ।
ಗಾಡಾಹ ತಾಪದಿಂದ ಬಾಡಿ ನೀರಡಿಸಲು (ತಾ) ।
ಗೂಢ ಸರೋವರ ನೋಡಿ ನೀರನೆ ಪೊಕ್ಕು ।
ಆಡಾಲು ಮದದಿ ನಕ್ರನು ಬಂದು ಪೀಡಿಸೆ ಭರಂದಿ ॥
ಮೂಢ ನಾನೆಲೊ ಕೃಷ್ಣ ಮಾಡೊ ರಕ್ಷಣೆಯನ್ನು ।
ಓಡಿ ಬಂದ ಭಯವ ನೀಡಿದ ಪರಿ ನೋಡಿ ॥ ೨ ॥
ಭೂಸುರ ವರನೊಬ್ಬನು ದೇಶ ದೇಶವ ತಿರುಗಿ ।
ಕಾಸು ಬಾಳದ ಸ್ತ್ರೀಯಳಿಗೆ ಆತನೆ ವಶವಾಗಿ ।
ಹೇಸಿಕಿಲ್ಲದೆ ಅಲ್ಲಿ ತಾ ಸೂನುಗಳ ಪಡೆಯೆ (ನೈದಿ) ಸಹ ।
ವಾಸರ ಕಳಿಯೆ ಕಾಲನು ಘೋರ ಪಾಶದಿ ಶಳೆಯೆ ॥
ಆ ಸಮಯದಿ ಕೊನೆ ಕೂಸನ್ನೆ ಕೂಗಲು ।
ವಾಸುದೇವ ವಿಠಲ ತಾ ಸಲಹಿದನೆಂದು ॥ ೩ ॥

## ಪಾಠ ಹೇಳುವ ಕಾಲ ಅಪರೋಕ್ಷವಾದಾಗ್ಗೆ ರಚಿಸಿದ್ದು

ಪದ ೨೧ ಆದಿ ತಾಳ

ಬಂದಾ ಕೃಷ್ಣ ಛಂದದಿಂದ ಬಂದ ನೋಡೆ ಗೋಪಾ ।
ವೃಂದದಿಂದ ನಂದಿಸುತ ಬಂದ ನೋಡೆ ॥ ಪಲ್ಲ ॥
ಗೋವಾ ಮೇವ ನೀವ ದೇವ ಬಂದ ನೋಡೆ ।
ದೇವತಾ ವಾದ್ಯಗಳಿಂದ ಬಂದ ನೋಡೆ ॥ ೧ ॥
ಪಾಪಾ ಪೋಪಾ ಗೋಪಾ ರೂಪ ಬಂದ ನೋಡೆ ।
ತಾಪಾ ಲೋಪಾ ಲಾಪಾ ಟೋಪಾ ಬಂದ ನೋಡೆ ॥ ೨ ॥
ಭಾಸುರ ಸುಖ ಸೂಸುತ ಬಂದ ನೋಡೆ ।
ವಾಸುದೇವ ವಿಟ್ಠಲ ತಾ ಬಂದ ನೋಡೆ ॥ ೩ ॥

## ಶ್ರೀ ಕೃಷ್ಣ ಬಾಲಲೀಲಾ

ಪದ ೨೨ ರಾಗ ರೇಗುಪ್ತಿ ತ್ರಿವಿಡಿ ತಾಳ

ಗೋಪ ಸತಿಯರೆಲ್ಲ ಕೇಳಿರೆನ್ನಯ ಮಾತ ।

ಈ ಪರಿ ಕೂಸಿನ ಕಂಡಿರ್ಯಾ ॥ ಪಲ್ಲ ॥
ತೊಟ್ಟಿಲೊಳಗೆ ಇಟ್ಟು ವತ್ತಿ ಮಾಕಾಡದೆ ।
ಮುಟ್ಟದೆ ಉಣಲಿಕ್ಕೆ ಕುಳತಿರಲು ॥
ಚಿಟ್ಟಕ್ಕಿ ಚೀರಿದ್ದು ಭೇಟಿ (ಖೋಡಿ) ಕಾನಳುತಿಹ ।
ಹೊಟ್ಟೆ ತುಂಬಾ ಉಣಲೀಸಾ ಎಷ್ಟೆಂಥೇಳಲಿ ನಾನು ॥ ೧ ॥
ಬಣ್ಣಿಸಿ ಬಣ್ಣಿಸಿ ಪದವ ಪಾಡಿ ತೂಗಿ ।
ಥಣ್ಣಾಗೆ ಬೀಸಿ ಬೀಸಣಿಕೆಯುಲಿ ॥
ಕಣ್ಣಾ ಮುಚ್ಚಿಸಿದೇವೆಂದರಿತು ಸುಪ್ಪಾಣಿಸೆ ।
ಅಣ್ಣಾ ತಾನೇಳುವ ನಿದ್ರೆಗೈಯ್ಯಲೀಸ ॥ ೨ ॥
ಅನಿಮಿಷರಾದೆವೆ ಅನಶನರಾದೆವೆ ।
ಮನಸು ಕೂಸಿನಲ್ಲೆ ನಟ್ಟಿಹ್ಯದೆಮಗೆ ॥
ಮನೆಕೆಲಸಗಳೆಲ್ಲ ಎಲ್ಲೆವೆ ನಮಗಿನ್ನು ।
ತನಯಾ ಪುಟ್ಟಿದ ಪುಣ್ಯದಿಂದಲ್ಲಿನ್ನೇನಂಬೆ ॥ ೩ ॥
ಚಿಕ್ಕವರೊಳು ಪೋಗಿ ಮಕ್ಕಳಾಟಿಕೆ ಆಡಿ ।
ಲೆಖ್ಖವಿಲ್ಲದ ದೂರು ಘಕ್ಕನೆ ತರುವ ॥
ರಕ್ಕಸರೆನಲು ತಾ ಲೆಕ್ಕಿಸದವರ ।
ಸೊಕ್ಕು ಮುರಿವನಿವನಕ್ಕೊಜಾಕ್ಕೆ ನಂಬೆ ॥ ೪ ॥
ದೇವತೆಗಳ ಮೊಸಲಾವಾಗ ಮೆಲುವನು ।
ಸೇವಕರಂತಲ್ಲೆ ತಾವಾ ಹೊರೆ ॥
ದಾವಾದಿ ಭಯದಿಂದ ಕಾವಾನೀತನೆ ವಾಸು ।
ದೇವಾ ವಿಟ್ಠಲನೆಂದು ಭಾವಿಸಿ ತಿಳುವೊನೆ ।

## ಶ್ರೀಕೃಷ್ಣ ಲೀಲಾ

ಪದ ೨೩ ರಾಗ ಭೈರವಿ ಅಟ್ಟ ತಾಳ

ಕೆಳದಿ ಕೇಳುವ ಬಾರೆ ನಳಿನಾಕ್ಷ ವನದಲ್ಲಿ ।
ಕೊಳಲನೂದುವ ಬಗೆಯಾ ॥
ನಳಿನ ಜಾಂಡವು ತಾನೆ ತೆಲೆದೂಗುತಲಿದೆ ।

ಕುಳತಿರ ವಶವಲ್ಲವೆ || ಪಲ್ಲ ||
ಸರಸಿಜ ನಯನಾಳಿ ಧರಿಯ ಭಾಗ್ಯವ ನೋಡೆ ।
ತರುಗುಲ್ಮಾಲತೆ ನೆವದಿ ಭರದಿ ಪುಲುಕಿತಳಾಗೆ ।
ಪರಿ ಪರಿ ಸುಮದಿಂದ ನೆರೆನಸು ನಗುತಿಪ್ಪದ ।
ಮುರುಳಿ ಕಣ್ಣಿಲಿ ನೋಡೆ ವರವಿಮಾನಗಳು ಸಂ ।
ಚರಿಸಿ ಮೆರವ ವೈಭವ ಧರೆಯುಲಾ ತಿಳಿಯದು ।
ಸುರನಿಕರಾಲಯ ಪರನಲ್ಲಿ ಯವೆ ಇಡುತ ಲೋಲ್ಯಾಡದೆ
ಬಿಡರು || ೧ ||
ವಾಮಾಲೋಚನೆ ಸುರರ ಧಾಮಾವೆಂಬಿಯಾ ಇದು ।
ಕಾಮತನಯ ಕಾಮದೇವ ಸೋಮಶೇಖರ ತಾನು ।
ತಾಮರಸಾಸನ ಪ್ರೇಮಾದಿ ನಲಿವುವಾ ।
ಆ ಮಹರಾದಿ ಲೋಕವೆ ಸಾಮಜ ಗಮನೆ ಕೇಳೆ ।
ನೀ ಮರುಳಾಗಬ್ಯಾಡಾ ಆ ಮುಕುತಿ ಸ್ಥಾನವೆ ।
ಶ್ರೀಮುಖ ವನಿತಿಯರು ಈ ಮುಕುಂದನ ಸೇವೆ
ಮಾಡುವರು || ೨ ||
ದೂರ ಜನರಿಗೆ ಸಾಲೋಕ್ಯ ಊರಲಿಪ್ಪರಿಗೆ ಸಾಮಿಪ್ಯ ।
ಗೋರಕ್ಷಕರಿಗೆ ಸಾರುಪ್ಯ ಸೇರಿದ ಯುವತಿಗೆ ।
ಭರದಿ ಸಾಯುಜ್ಯವೆ ಮೀರಿದೆ ಮುಕುತಿಗಿದು ||
ಭಾರಿ ಭಾರಿಗೆ ಸಾಮಾ ಪೂರೈಸಿ ಮುಕುತರು ।
ತೋರುವರಿಲ್ಲಿ ಆನಂದ ।
ಈ ರಭಸದಿ ವೇಣು ಪೂರೈಸಿ ಸುಖವೀವ ।
ಧೀರ ವಾಸುದೇವ ವಿಠಲಾ || ೩ ||

## ಕೃಷ್ಣ ದೇವರ ಸ್ತೋತ್ರ

ಪದ ೨೪ ಆದಿ ತಾಳ

ಅಳಬ್ಯಾಡೇಳವೊ ರಂಗಮ್ಮ ನಿನ್ನ ।
ಇಳಿಯಾರ ನೋಡುತಿದೆ ಗುಮ್ಮಾ || ಪಲ್ಲ ||

ಒದರಿದರೆ ಕೇಳಿಲವ್ವೊ ತವ್ವಾ ಅದು ।
ಅದರುತಿವೆ ಬೊಮ್ಮಾಂಡ ತವ್ವಾ ॥
ಬೆದರಿ ದಿವಿಜರು ತಮತಮ್ಮ ನಿಜ ।
ಸದನ ಬಿಡುತಿಹರು ನೋಡವ್ವಾ ॥ ೧ ॥
ಬೆರಳುಗರು ಘಾಯುಗಳಿಂದ ಆ ।
ದಃರುಳನ್ನ ಜಠರ ತಳದಿಂದ ॥
ಕರಳು ಮಾಲಿಕೆ ಕಿತ್ತಿ ತಂದ ತನ್ನ ।
ಕೊರಳಲ್ಲಿ ಹಾಕಿಹ್ಯ ಛಂದ ॥ ೨ ॥
ಏಸು ದೈತ್ಯಾ ರಾಸಿಗಳನು ತಾನು ।
ಮೋಸಗೊಳಿಸಿ ಕೊಲ್ಲುವಾನು ॥
ದಾಸನೆಂದರೆ ಕಾಮಧೇನು ಸುಮ್ಮಗಿರುವ ।
ವಾಸುದೇವ ವಿಟ್ಠಲ ನೀನು ॥ ೩ ॥

ಪದ ೨೫ ರಾಗ ಮುಖಾರಿ ತ್ರಿವಿಡಿ ತಾಳ

ಎನ್ನ ಬಿನ್ನಪ ಸಖಿ ಚನ್ನಾಗಿ ತಿಳಿಸೆ ।
ಚನ್ನಿಗರರಸ ಪೋರನ್ನ ಕೃಷ್ಣನ ಮುಂದೆ ॥ ಪಲ್ಲ ॥
ಜನನಿ ಜನಕಾ ಚಿಕ್ಕತನದಿಂದ ತನಗಿತ್ತ ।
ಮನಮುಟ್ಟಿ ವಿನಯದಿ ವಿಸಿಯೋಗಿಸಿ ॥
ಜನರೊಳು ಘನ ಧರ್ಮ ಧನ ಘಳಿಸಿದರಂತೆ ।
ಅನುಸ್ಮೃತಿ ಎನಗಿನ್ನು ಇನಿತಿಲ್ಲವು ಪೇಳೆ ॥ ೧ ॥
ಅಂದಿಂದಾತನ ಮೊಗ ಛಂದಾಗಿ ನೋಡಿಲ್ಲವೆ ।
ಒಂದು ಭಾರೆನ್ನ ತಾನು ಬಂದು ತೋರನೆ ॥
ಮುಂದಿ ಪೇಳುವದು ಕೇಳ್ಯಾನಂದಿಸುವೆನಲ್ಲದೆ ।
ಮುಂದೇನು ಗತಿಯೆಂದು ಇಂದುಮುಖಿಯೆ ಪೇಳೆ ॥ ೨ ॥
ದಿನಗಳೊದಗಿದವೇ ಜನರೆಲ್ಲ ಕಂಡಂತೆ ।
ಬಿನಗು ಮಾತುಗಳನು ಎನಗಂಬರೆ ॥
ಎನಗೇನು ಇದರಿಂದ ತನಗೆ ಆ ಕೀರುತಿ ।

ಮನವುಟ್ಟಿ ನೀ ಪೇಳೆ ವನಜಾಕ್ಷಗೆ ಸಖಿ ॥ ೩ ॥
ಹಿರಿಯ ಸತಿಯರಂತೆ ಪರಿ ಪರಿ ಭೂಷಣ ।
ಸರಿಬಂದರೆ ಉಪಚರಿಸುವಂತೆ ॥
ಘೋರಿಯರ ಸತಿಯರ ನರರ ದೃಷ್ಟಿಯು ಬಾಧೆ ।
ಪರಿಚಾರಕರಿಟ್ಟು ಪರಿಹರಿಸಾ ಪೇಳೆ (ಪಳೆ) ॥ ೪ ॥
ಆ ಸುದತಿಯರನ್ನ ಲೇಸಾಗಿ ಭೋಗಿಸೆ ।
ನಾ (ವಾ) ಸೂಯಾ ಆದರಿಂದ ಲೇಶ ಮಾಡೆ ।
ವಾಸುದೇವ ವಿಠಲ ಈ ಸಮಯದಲಿ ಎನ್ನ ।
ತಾ ಸುಮುಖದಿಂದ ನೋಡೆ ನಾ ಸುಖಿ ಸಖಿಯೆ ॥ ೫ ॥

ಪದ ೨೬  ರಾಗ ಮಧ್ಯಮಾವತಿ  ಅಟ್ಟ ತಾಳ

ಇವಗಳ ಹಾವಳಿಗಂಜುವಳಲ್ಲ ಅ ।
ಲ್ಲವಗಳ ಸ್ಮೃತಿಗೆ ನಾನಂಜುವಿನೆ ॥ ಪಲ್ಲ ॥
ಚಂದ್ರ ಚಂದ್ರಿಕೆಯು ಉದಯಿಸಲ್ಯಾತಕೆ ।
ನಿಂದ್ರಿಸುವಿನೆ ನಾನದರನ್ನು ॥
ಇಂದ್ರನನುಜನಾ ಶ್ರುತಿ ಸ್ಮೃತಿಗೆ ಬರಲು ।
ನಿಂದ್ರಿಸಲಾರಿನೆ ನಿಮಿಷ ಮನ ॥ ೧ ॥
ಪಲ್ಲವಿಸವ್ಯಾತಕೆ ಚೂತತರುಗಳಿಗಿನ್ನು ।
ನಿಲ್ಲಿಸುವಿನೆ ಅದರುಲ್ಬಣವ ॥
ಪಲ್ಲವ ಪಾದವ ಮನಸಿಗೆ ಬಂದರೆ ।
ತಲ್ಲಣಿಸುವೆನೆ ತಾವರೆ ನಯನೆ ॥ ೨ ॥
ಅಂಬುದಗಳೆಲ್ಲ ಅಂಬರವೇರಲಾ ।
ಡಂಬರಕ್ಕೆ ನಾನು ಇಂಬು ಕೊಡೆ ॥
ಅಂಬುದ ಶ್ಯಾಮನು ಮನದಲಿ ನಿಲಲು ।
ಥಂಬಿಸಲಾರಿನೆ ಕಂಬು ಕಂಠಿ ॥ ೩ ॥
ಕುಂದ ಕುಸುಮಗಳು ವಿಕಸಿತವಾದರು ।
ವಂದಗೆಡುವದಿಲ್ಲ ಮನಸಿನಲ್ಲಿ ॥

ಕುಂದೆರ ರದನ ಎನ ಮನಸಿಗೆ ತೋರಲು ।
ಕಂದಿ ಕುಂದುವೆ ಮನವುಂದಿರದಿ ॥ ೪ ॥
ಏವಮಾದಿಗಳೆಲ್ಲ ಏನು ಮಾಡವೊ ವಾಸು ।
ದೇವ ವಿಟ್ಠಲ್ಲ ಸ್ಮೃತಿ ಬಾರದಿರೆ ॥
ಶ್ರೀವರ ಚಿತ್ತಕ್ಕೆ ಬಂದರೆ ನಿಂದರೆ ।
ತಾವರೆ ನಯನೆ ನೀ ತಂಟು ತೋರೆ ॥ ೫ ॥

ಪದ ೨೭ ಅಟ್ಟ ತಾಳ

ತೋರೆಲೆ ಪ್ರಾಣಕಾಂತನ ಮಾರ ಎನ್ನ ಸಂ ।
ಹಾರ ಮಾಡಲು ದಂಡು ತಂದನೆ ॥ ಪಲ್ಲ ॥
ಮಂದಮಾರುತಗಳು । ಚಂದ್ರ ಕಿರಣಗಳು ॥
ಮುಂದಾಗಿ ಬಂದೊದಗಿದವು ॥ ೧ ॥
ಅಂತರಂಗದಿ ಮನೋಭ್ರಾಂತಿ ಬಿಡಿಸುವವ ।
ಸಂತನೀಗಲೇ ಬಂದಿರುವನೆ ॥ ೨ ॥
ಭೃಂಗಗಳೇ ರಣರಂಗದಿ ಕೂಗುವ ।
ಸಂಗತಿಗೆ ಬೆದರಿದನೆ ॥ ೩ ॥
ಶುಕವೇರಿ ಧನುವಿನೋಳ್ । ವಿಕಸಿತ ಸಮ ಬಾಣ ॥
ಮುಖದೊಳು ಗುರಿಯನ್ನೆ ನೋಡುವ ॥ ೪ ॥
ಆವಾಗಲು ವಾಸುದೇವ ವಿಟ್ಠಲನ । ಪಾ ।
ದಾವೆ ಗತಿಯೆಂದಿರುವೆನೆ ॥ ೫ ॥

## ಶ್ರೀಕೃಷ್ಣ ಯಶೋದೆ ಸಂವಾದ

ಪದ ೨೮ ರಾಗ ರೇಗುಪ್ತಿ ತ್ರಿವಿಡಿ ತಾಳ

ತಮ್ಮಾ ಕೇಳಿದ್ಯಾ ಪರಬೊಮ್ಮ ನೀನಂತೊ ।
ಸುಮ್ಮಾನೆ ಪುಸಿ ಸುದ್ದ್ಯಾರಮ್ಮ ಪೇಳಿದರೆ ॥ ಪಲ್ಲ ॥
ನಿತ್ಯ ತೃಪಿತನು ನೀನಂತಲ್ಲೊ ಕೃಷ್ಣಯ್ಯಾ ।
ಸುತ್ತಿ ಬಂದಿನೆ ನಾಲಿಗಾರದೆ ಅಮ್ಮಾ ॥ -
ಹತ್ತುಸಾವಿರ ಭಾನುಪ್ರಭೆಯುಳ್ಳವನಂತೊ ।

ಕತ್ತಲೆ ಮನೆಪೋಗಲೊಬ್ಬನಂಜುವಿನೆ ॥ ೧ ॥

ಪುರಾಣ ಪುರುಷ ನೀನಂತಲ್ಲೊ ಕೃಷ್ಣಯ್ಯಾ ।
ಆರು ತಿಂಗಳು ಪೋದಾವಂದೆಲ್ಲ ಎನಗ ॥
ನಿರತಿಶಯ ಮಹಾ ಮಹಿಮೆ ಉಳ್ಳವನಂತೊ ।
ಪೋರತಿ ಮನೆಯೊಳು ನಡೆಯಲಾರೆ ॥ ೨ ॥

ಅಣ್ಣಾ ನೀ ಸರ್ವಜ್ಞನೆಂಬೋರೊ ಜಗವೆಲ್ಲ ।
ಬೆಣ್ಣೆಯು ಸಿಗದಲ್ಲೆ ಪುಡುಕಿದರೆ ॥
ಸಣ್ಣವ ನೀನಲ್ಲವೆಂಬೊರೊ ಪಿರಿಯಾರು ।
ಮಣ್ಣು ನಾ ಮೆದ್ದಾರೇಟೊಣದೆಲ್ಲವಮ್ಮಾ ॥ ೩ ॥

ಜಗದುದರನು ನೀನಂತಲ್ಲೊ ಕೃಷ್ಣಯ್ಯ ।
ನಗುಚಾಟಲು ಸಣ್ಣ ಪೊಟ್ಟೆ ನೋಡೆ ॥
ನಿಗಮಗಳು ನಿನ್ನ ತುತಿಯಂತೊ ಗೋವಿಂದ ।
ನಗುವರಲ್ಲವೆ ಗೋಪ ನಾರಿಯರು ॥ ೪ ॥

ಮೂಢ ದೈತ್ಯರಿಗೆಲ್ಲದಲ್ಲಣ ನೀನಂತೊ ।
ಜಾಡ ವೈಯ್ಯನ ನೋಡಿ ಅಂಜುವಿನೆ ॥
ಬೇಡಿದ ಪುರುಷಾರ್ಥ ಕೊಡುವನು ನೀನಂತೊ ।
ಬೇಡಿದೆ ನಮ್ಮಮ್ಮ ಅಮ್ಮೆ ಕೊಡೆಂದು ॥ ೫ ॥

ಬೆಟ್ಟವ ನೀನೆತ್ತಿದಂತಲ್ಲೊ ಕೃಷ್ಣಯ್ಯಾ ।
ಬಟ್ಟು ನಿನ್ನದು ನೋಡೆ ಎತ್ತಲಾರೆ ॥
ಘಟ್ಯಾಗಿ ವಿಪ್ರರು ಪೇಳೋದು ಪುಶಿ ಏನೊ ।
ಹೊಟ್ಟೆಗೋಸುಗ ಸುಳ್ಳು ಪೇಳುವರೆ ॥ ೬ ॥

ಏಸು ಲಕ್ಷಣವಿವೆ ನೋಡಬೇಕಂದರೆ ।
ಪುಶಿದ್ಯಾಕುಸರಾನು ನೋಡೆಂದನು ॥
ವಾಸುದೇವ ವಿಠಲಾ ಈ ಪರಿ ಗೋಪಿಯ ।
ಮೋಸಗೊಳಿಪ ಕೃಷ್ಣ ನಮ್ಮ ಸಲಹಲಿ ॥ ೭ ॥
ಭೋಗಗಳು ಕೊಟ್ಟರೆ ಮರವೆ (ಮರಳಿ) ಆದಂದನಾ ।

ಪದ ೨೯ ರಾಗ ಸಾರಂಗ ಝಂಪಿ ತಾಳ

ಏನು ಗತಿ ಎನಗಿನ್ನು ಏನುಗತಿಯೋ ನೀನು ।
ಅನುಕೂಲವಾಹದನಕ ಸಿರಿ ಕೃಷ್ಣ ॥ ಪ ॥
ಕರಣಗಳು ಕಾಯು ಮೊದಲಾದ ಬದುಕಗಳೆಲ್ಲ ।
ಸ್ಥಿರತರಗಳಲ್ಲೆಂದು ತೋರಿಸಲು ॥
ಪರಮ ಭಕುತಿಯು ಪುಟ್ಟಿ ಮೊದಲೆ ನಾನಿನ್ನ ಪದ ।
ಮರದು ಬಿಡುವೆನು ತಡಿಯದೇ ಕರುಣಿ ॥ ೧ ॥
ಹೀಗೆ ತೋರದೆ ಪೋದರೆ ಎನಗೆ ಹಂಬಲವು ।
ಆಗುವದು ಸತ್ಯಲೋಕಗಳ ತನಕಾ ॥
ಭೋಗಗಳು ಕೊಟ್ಟರೆ ಮರೆವೆ (ಮರಳಿ) ಅದರಿಂದ ನಾ ।
ಕೂಗುವೆನು ಕೊಡದಿದ್ದರೆ ॥ ೨ ॥
ಪಾಮರನ ಮಾಡಲೆನ್ನನು ತಿಳಿಯದಲೇವೆ ।
ಸೀಮೆ ಇಲ್ಲದೆ ಪಾಪ ಮಾಡುವೆನೊ ॥
ಪ್ರೇಮದಲಿ ಪಾಂಡಿತ್ಯ ನೀಡಿದರೆ ಭಕತಜನ ।
ಸ್ತೋಮ ನಿಂದಿಸುವೆನಯ್ಯಾ ॥ ೩ ॥
ಧನದಿಂದ ಹೀನನ್ನ ಮಾಡೆ ಲೋಕದಲಿನ್ನು ।
ಜನರು ಕೊಡುವದು ಎಲ್ಲ ಎನಗೆ ಕೊಡಲೆಂಬೆ ॥
ಧನವು ನೀ ಕೊಡಲು ಬಲು ಮದದಿಂದ ಕೆಟ್ಟು ಸ ।
ಜ್ಜನಕೆ ಕಾಸೊಂದು ಕೊಡಿನೊ ॥ ೪ ॥
ಏಸು ಪರಿಯಲ್ಲಿ ಪೇಳಿದರು ಕೇಳೆನ್ನ ನಿಜ ।
ವಾಸನಿಯು ತನಗೆ ತಾನಿಟ್ಟಾಹದ್ದೈ ।
ವಾಸುದೇವ ವಿಠಲ ನೀ ಎನ್ನಯ ಮನದಲ್ಲಿ ।
ವಾಸವನು ಮಾಡಿ ಬೋಧೈಸದನಕ ॥ ೫ ॥

## ಶ್ರೀ ನೃಸಿಂಹ ದೇವರ ಸ್ತೋತ್ರ

ಪದ ೩೦ ರಾಗ ಘಂಟಾ ಆದಿ ತಾಳ

ನರಸಿಂಹ ನರಸಿಂಹ ನಮಿಸುವೆನೊ ಘೋರ ।

ದುರಿತ ಬೆನ್ನ ಬಿದ್ದಿದೆ ಪರಿಹರಿಸೊ ಶ್ರೀ ನರಸಿಂಹ ॥ ಪಲ್ಲ
ಪರಮೇಷ್ಠಿ ಹರ ಸುರಪತಿ ಮುಖರಾ ।
ಸುರನಿಕರ ಪೊರೆವ ಪ್ರಭೊ ಪ್ರವರ ॥
ದುರಿತವು ಆದರನ್ನ ಬಾಧಿಸದಂತೆ ।
ಪೊರೆದ ಪರಿಯಿಂದ ಎನ್ನ ಪೊರಿಯೊ ॥ ೧ ॥
ಕಾಯ್ದು ತನ್ನಯ ತನ್ನ ತಂದೆಯ ಬಾಧೆ ।
ಭಯದಿಂದ ಮನದಲ್ಲಿ ನಿನ್ನ ನೆನಿಯೆ ॥
ದಯದಿಂದ ನೀ ಕಂಭದಿಂದಲಿ ಬಂದು ಪೊರೆದಂತೆ ಎನ್ನ ।
ಭಯ ಪರಿಯೋ ಶ್ರೀ ನರಸಿಂಹ ॥ ೨ ॥
ನಿನ್ನ ಪೆಸರೆಂದರೆ ದುರಿತಂಗಳು ।
ತನ್ನಿಂದ ತಾನೆ ಜರಿಯುವವು ॥
ಚನ್ನಾಗಿ ಶರಣರ ಪೊರೆದದಕೆ ।
ನಿನ್ನವರೆಂದು ಕೇಳಿ ಬಲ್ಲೆ ಶ್ರೀ ನರಸಿಂಹ ॥ ೩ ॥
ನಖ ಮುಖ ಶಿಖಿ ತನ್ನ ನೆನಿಯೆ ।
ಸುಖಿತರವಾಹೋದು ಶರಣರಿಗೆ ॥
ಮುಖಭುಜ ರವಿಸಾಕ್ಷಿ ಇದಕಾಗಿರೆ ।
ವಿಖನ ಸಾರ್ಚಿತ ಪಾದ ।
ಸುಖಮಯನೆ ಶ್ರೀ ನರಸಿಂಹ ಕಾಯೊ ॥ ೪ ॥
ಅರಿದರ ಧರ ವರ ಕರಯುಗನೆ ।
ಕರಯುಗ ಜಾನು ಶಿಖರದಲ್ಲಿಪ್ಪನೆ ॥
ಶಿರದಿಂದೊಪ್ಪುವ ಕರತಳನೆ ।
ವರ ವಾಸುದೇವ ವಿಠಲ ಪೊರೆಯೋ ಶ್ರೀ ನರಸಿಂಹ
ಕಾಯೊ ॥ ೫ ॥

## ಶ್ರೀ ರಾಮದೇವರ ಸ್ತೋತ್ರ

ಪದ ೩೧ ರಾಗ ಶಂಕರಾಭರಣ ತ್ರಿವಿಡಿತಾಳ

ಶರಣಾಗ್ರಣಿ ರಾಮ ಚರಣಾಂಬುಜ ಬಿಡೆ ।

ತರುಳ ನಳಿನ ಷಟ್ ಚರಣ ಬಿಡ ಬಲ್ಲದೆ || ಪಲ್ಲ ||
ಹನುಮನ ಭಜನೆಂಬ ಘನವಾರಿ ಪೂರಿತ |
ಮುಪಸರೋವರ ಆಯನ ವಾಗಿಪ್ಪ ||
ಜನಕಸುತೆ ಹಂಪಿ ಮನಸಾಪ ಹಾರಿ |
ದಿನಕರನ್ವಯದಿಂದ ವಿಸುತ ವಾಗಿಪ್ಪ || ೧ ||
ಅಮರರೋತ್ತಮರೆಂಬ ಭ್ರಮರರಾ ರವಗಳ |
ಸಮಯೋಚಿತ ಸಾಮಭಿ ಸೇವಿತಾ ||
ವಿಮಲಾ ತಮದಿಂದ ಸಾಂದ್ರ ಶಮಲಾತಿ ದೂರ |
ಕಮಲಾಸನ ಪ್ರೀಯ ಕಮಲೋತ್ತುಮಪಾದ || ೨ ||
ಶಿಲೆಯ ಬಾಲೆಯ ಮಾಡಿ ಮಲವಳಿದು ಮುನಿ |
ಕುಲವಗೆಡಿಸಿ ಸತ್ಕುಲ ವೆನಿಸಿದೆ ||
ಜಲಧಿಯೊಳಗೆ ಸೇತು ನಿಲಸಿ ಸಜ್ಜನರಿಗೆ |
ನೆಲೆವಾಸುದೇವ ವಿಠಲದೇವ ಪಾದಪದುಮಾ || ೩ ||

## ಧನ್ವಂತ್ರಿ ದೇವರ ಪ್ರಾರ್ಥನಾ

ಪದ ೩೨ ರಾಗ ಕಾಂಬೋದಿ ಝಂಪಿ ತಾಳ

ಮನಸಿಗೆ ಬಂದ ಧನ್ವಂತ್ರಿ ವೈದ್ಯನೇ |
ಮನಸಿನ ರೋಗವ ಪರಿಹರಿಸೊ || ಪಲ್ಲ ||
ಧನ ಲೇಶ ಕೇಳಾ ಬಡವರ ಪೊರೆಯೊ ನೀ |
ಮನೆಗೆ ಬಂದರೆ ತನು ರೋಗಗಳೋಡೋವು ||
ನೆನಹ ಮಾರ್ಗಕೆ ಬೇಗ ತಡಿಯದೆ ಈ ಮನ |
ಕುನರ ಸೂಲಿವುಳ್ಳ ವಾತವ ಹರಿಸೊ || ೧ ||
ನಾಮವ ನುಡಿವಲ್ಲಿ ಅರುಚಿ ಇದಕಿದೆ |
ಭಾಮೆಯು ಕಂಡರೆ ತಲ್ಲಣವಾಹದೊ ||
ಶ್ರೀ ಮನೋಹರನ ಸ್ಮರಣೆ ಹಾರುತಿದೆ |
ಮಾಹ ದೋಷವುಳ್ಳ ಪಿತ್ತವ ಬಿಡಿಸೊ || ೨ ||
ಹಿರಿಯರು ನೋಡಲು ಗುರುಗುರುಗುಟ್ಟುತಿದೆ |

ಪರಪರಿ ವಿಷಯುದ ನಂಜಿಲಿಂದ ।
ಪರಿಹರಿಸೊ ಶ್ಲೇಷ್ಮ ವೊರೆಹೊಕ್ಕೆನು ನಾನು ।
ಪರಿಹರಿಸೊ ವಾಸುದೇವ ವಿಠಲರೇಯ ॥ ೩ ॥

ಪದ ೩೩ ರಾಗ ಪಾಡಿ ತ್ರಿವಿಡಿತಾಳ

ಹುಚ್ಚುಗೊಳಿಸುವರೆ ಮರುಳ ತರುಳಾರ ।
ಅಚ್ಚುತ ಪರಮುಗಂಭೀರ ಪುರುಷನೆ ॥ ಪಲ್ಲ ॥
ಎಲ್ಲಾವು ಬಯುಸುವ ಹಟದಿ ಶಿಸುವಿಗೆ ।
ಬೆಲ್ಲವ ತೋರಿಸಿ ನಿಲುಕದಿಪ್ಪೋದು ॥ ೧ ॥
ಮಿನಗುವ ಮನ ತೋರೆ ತನು ಬೆವರೆ ಪೋಗೆ ।
ಕನಡಿಭಾನಿಂದುದ ಕಳಗೊಳಿಸುವರೆ ? ॥ ೨ ॥
ಕಪ್ಪುವಸ್ತುವ ಕಂಡು ನಡಗುವಂಗೆ ।
ಕಪ್ಪ ಕಲ್ಪಿಸೆ ಅಪ್ಪಾ ಎನ್ನೆ ಅಪ್ಪಿ ನಗಿಸುವರೆ ॥ ೩ ॥
ನಗುವ ಕೂಸಿನ ಅಳಿಸಿ ಮುದ್ದಾಡಿ ।
ನಗಿಸುವೀ ನೀನು ಬಗೆ ಬಗೆಯಿಂದ ॥ ೪ ॥
ಜೀವರ ಈ ಪರಿ ಮಾಡದಿದ್ದರೆ ವಾಸು ।
ದೇವ ವಿಠಲ ನೀ ಕಾಲಾಕಳವದೆಂತೊ ॥ ೫ ॥

ಪದ ೩೪ ರಾಗ ಕೇತಾರಗೌಳ ತ್ರಿವಿಡಿತಾಳ

ಪಕ್ಷಿವಾಹನ ದಯುಸಿಂಧು ನೀ ಎನ್ನ ।
ಚಿಕ್ಕ ಮನಉರಗವನ್ನು ನೀನೆ ತಿದ್ದೊ ॥ ಪಲ್ಲ ॥
ಕತ್ತಲೆಯೊಳು ಬಲು ಕಾಲಕಟದೆಯಾಗಿ ।
ಮತ್ತೆ ಬೆಳಕು ಕಂಡು ಬೆದರುತಿದೆ ।
ಕತ್ತಲಂಜಿಕೆ ತೋರಿ ಬೆಳಕಿನ ರುಚಿಯುನು ।
ಇತ್ತು ಕುಶಲಗತಿ ಕಲಿಸಯ್ಯಾ ॥ ೧ ॥
ಹಿಂದಕ್ಕೆ ತಿರಗದೆ ತಾನಾಗಿ ಬ್ಯಾಗನೆ ।
ಮುಂದಕ್ಕೆ ನಡದು ಪರರ ಬೆಳಸು (ಕು) ಗಳ ॥
ಒಂದನ್ನ ಬಯುಸದೆ ಪದ್ಧತಿ ಬಿಡದಂತೆ ।

ಒಂದಾಗಿ ಗವ್ಯಸ್ಥಾನವ ಸೇರಿಸಯ್ಯಾ ॥ ೨ ॥
ವಿಧಿನಿಷೇಧಗಳೆಂಬ ಗಿಲಿಕಿಯ ಧ್ವನಿಗೈಸಿ ।
ಹೆದರಿಸೊ ಸನ್ಯಾಯ ಕಶದಿಂದಲೀ ॥
ಮುದದಿ ಭಕುತಿ ಗುಣವ ಕೊರಳು ಕಟ್ಟಿ ಬಿಗಿದು ।
ಪದುಮಾಕ್ಷ ನಿನ್ನ ಪಾದವ ಸುತ್ತಿಸಯ್ಯಾ ॥ ೩ ॥
ಉತ್ತಮ ಗುಣವುಳ್ಳ ವಾಜಿಯಿದನೆ ಮಾಡಿ ।
ವಸ್ತು ಎನ್ನದು ಮಾತ್ರವೆಂದೆನಿಸಿ ॥
ಚಿತ್ತಕ್ಕೆ ಬಂದಂತೆ ಇದಿರಾನು ನೀ ನಿತ್ಯ ।
ಹತ್ತಿ ಹರಿಸುವನು ಸಮ್ಮತವೆನಗೆ ॥ ೪ ॥
ಲೇಸಾದಾಹಯಗಳೊಳು ನೀನಿವೆ ಜಗದೊಳು ।
ಲೇಸು ಮಾಡಿದಿಯೆಂಬ ವಾರ್ತೆ ಕೇಳಿ ॥
ವಾಸುದೇವ ವಿಠಲ ನಿನಗೆ ಬಿನ್ನೈಸಿದೆ ।
ದಾಸನ ಮಾತು ಲಾಲಿಸಿ ಕಾಯೋ ಸರ್ವೇಶ ॥ ೫ ॥

ಪದ ೩೫ ರಾಗ ಮೋಹನ ಅಟ್ಟ ತಾಳ

ಮರೆಯು ಮಾಡುವರೆ ರಂಗಯ್ಯ । ಥೆರೆಯು ಹಾಕುವರೆ ॥
ವರದನು ಜಗಕೆಂದು ಎನಿಸಿದ ಬಳಿಕ ॥ ಪಲ್ಲ ॥
ಕುರುಹಾ ನಾನರಿಯೆ ನಿನ್ನಯ ರಂಗಯ್ಯ । ಸುರತವಬಲ್ಲೆ ॥
ಗುರುತು ಬಲ್ಲವಗೆ ಈ ಪರಿ ಮಾಡಿ ತೋರಿದೆ ॥ ೧ ॥
ಗುರುತುಯೆಂದರಿಯಾ ಸರ್ವದಾ ಎನ್ನ । ಥೊರೆಯು ನೀನಲ್ಲೆ ॥
ಥೆರೆಯು ನಿನ್ನದು ಲೋಕ ಪರಿಪಂಥಿಯಾಹದೆ ॥ ೨ ॥
ದುರಿತವು ಮೊದಲೆ ಪೋದವು ವಾಸುದೇವ ವಿಠಲನೇ ।
ಪೊರೆಯೊ ದಯವು ನಿನ್ನ ಸಹಜ ಪೋಗುವದೆ ॥ ೩ ॥

ಪದ ೩೬ ಕೇತಾರ ಗೌಳ ತ್ರಿವಿಡಿ ತಾಳ

ಸೃಷ್ಟಿಕಾರಣ ದಯಾ ದೃಷ್ಟಿಲಿ ನೋಡೆನ್ನ ।
ಘಟ್ಟಿಗನೆನಬೇಕೊ ಇಷ್ಟಿಲ್ಲ ಅಪರಾಧ ॥ ಪಲ್ಲ ॥
ಎಷ್ಟವಾನರ (ಇಷ್ಟವರನ) ಬಂಧದೋಳಿನ್ನ ಶಿಲುಕಿಸಿ ।

ದುಷ್ಟರೂ ವಂದಾಗಿ ತಾವೆಲ್ಲ ಎನ್ನನೂ ||
ಕಷ್ಟಬಡಿಸೇವಂತ ದ್ವೇಷದಿ ಹವಣಿಸ |
ಲಿಷ್ಟರೊಳು ನೀ ಕೇಳುವಂತೆ ಕೂಗಿದೆನಲ್ಲ || ೧ ||
ನಿನ್ನ ಮಾತುಗಳಾಧಾಂಗೆನ್ನ (ಕೂಡಿಸಿ) ಮಾಡಿಸಿ |
ಅನ್ಯ ಪಾರುತಿಗಳು ಚನ್ನಾಗಿ ನುಡಿಸಲು ||
ಅನ್ಯಾಯ ಬಂತೆಂದು ಅವರಂತೆ ಮುಡಿದು ನಾ |
ಮನ್ನದೊಳಗೆ ಮೊರೆ ಇಟ್ಟಿದನರಿಯಾ || ೨ ||
ಒಳಗೆ ಹೊರಗೆ ತುಂಬಿಕೊಂಡಿಹರು ಬಹಳ |
ಖಳರ ಅವರು ದೇಶ ಕಾಲವಯ್ಯಾ ||
ಬಳಿಯಲಿ ನಿನ್ನವರು ಗೂಢ ವೇಷದಿ ತಾವು |
ಸುಳಿಯಲು ಅವರನ್ನು ಗುರುತು ಮಾಡಿದೆನಯ್ಯ || ೩ ||
ಈಗಲು ನಿನ್ನ ಬಲಪವನನಾಗಮದಿಂದ |
ಬ್ಯಾಗನೆ ಖಳರನ್ನ ವರದು ಸವರಿಸೊ ||
ಜಾಗರೂಕನಾಗಿ ಅದೆ ಪದ್ಧತಿ ಪಿಡಿದು |
ಸಾಗಿ ಬಂದೆನು ಕೇಳು ಎನ್ನಿಂದೇನಪರಾಧ || ೪ ||
ಲೇಸಾಗಿ ಬಲವಿತ್ತು ಎನ್ನನು ಕಳಿಸಲು |
ಆಸು ಅಸುರರನ್ನು ತರದೊಟ್ಟುವೇಯ್ಯಾ ||
ವಾಸುದೇವ ವಿಠಲ ನೀ ಕೈಯ್ಯ ಪಿಡಿದರೆ |
ಆ ಶುಕಾರ್ಯರ್ಕೆ ಬಾಹೆ ನೋಡೆನ್ನ ಶಕುತಿ || ೫ ||

ಪದ ೩೭ ರಾಗ ಸ್ವಟಟ ತ್ರಿವಿಡಿ ತಾಳ

ಎಂತು ರಕ್ಷಿಪಿ ಎನಗಾಂತು ಶಿಕ್ಷಕರಿಲ್ಲ || ಪಲ್ಲ ||
ಸಕಳ ಸಂಶಯಗಳ ವಿಕಳವ ಮಾಡಿಸಿ |
ಅಕಳಂಕ ಮತಿ ಸೋಮ ಸುಕಳ ಮಾಡುವರಿಲ್ಲ || ೧ ||
ಸಂತತ ನಿನಗೇನು ಅಂತರ ಸ್ಥಿತಿಯೆಂದು |
ಚಿಂತಕ ಬಂಧು ಅದ ಸಂತ ಜನರ ಕಾಣೆ || ೨ ||
ಪರಿ ಪರಿ ಬಗೆಯಿಂದ ಪರ ತತ್ವಗಳನು |

ಅರಿದು ತಿಳಿಪದ್ಯಚ್ಚರಿ ಪರು ಎನಗಿಲ್ಲ ||೩||
ತುತಿ ಮಾಡಿ ಕೆಲರು ಸನ್ಮತಿಯಾಗೊಡಿಸುವರು |
ಕ್ಷಿತಿಯೊಳಗೆನಗುಪ ಕೃತಿಯಾ ಮಾಡುವರಿಲ್ಲ ||೪||
ಹಲವು ಪರಿಯು ಲೆನ್ನ ಸಲಹುವ ಗುರುದೈವ |
ಕುಲಪ ವಾಸುದೇವ ವಿಠಲ ನೀ ಕರುಣಿಸೊ ||೫||

ಪದ ೪೮ ರಾಗ ಬ್ಯಾಗಡೆ ತ್ರಿವಿಡಿ ತಾಳ

ಎನ್ನನುದ್ಧರಿಸಲು ಘನ್ನ ಬಿಂದುಗಳು |
ಇನ್ನು ಉನ್ನತವಾಹವು ಕೇಳೊ ಹರಿಯೆ || ಪಲ್ಲ ||
ಅನ್ನವರತದಿ ದುರ್ವಿಷಯ ಲಂಪಟದೊಳು |
ಚನ್ನಾಗಿ ಪತಿತ (ಪೂರ್ತಿತಾ) ಎನ್ನಂತಜಾಮಿಳನೆ ||
ಇನ್ನಿದು ತಿಳಿದು ನೀ ಎನ್ನ ಪೊರೆತನ ಮಾಡೆ |
ನಿನ್ನ ನಿವಿತ್ತ ಬಂಧುತನವೆ ವೆಗ್ಗಳವೊ ||೧||
ಮನ್ನಿಸಿದವನಲ್ಲ ಪೂಜಿಸಲಿಲ್ಲ |
ತನ್ನ ಸಂಬಂಧಿಯು ಮೊದಲಿಗನಲ್ಲ ||
ಎನ್ನಂತೆ ಗಜೇಂದ್ರನೆ ಎನ್ನನುದ್ಧರಿಸಲು |
ನಿನ್ನ ಪತಿತ ಪಾವನ್ನತೆ ಘನ್ನವೊ ||೨||
ಏಸಪರಾಧ ಮಾಡಿದ ಚೈದ್ಯಾದಿಗಳು |
ಈಸಪರಾಧ ರಾಶಿಗಳು ಮಾಡಿದರೆ ||
ವಾಸುದೇವ ವಿಠಲ ಎನ್ನ ರಕ್ಷಿಸಲು |
ಸೂಸುವದೋ ನಿನ್ನ ಭಕುತ ವಾತ್ಸಲ್ಯತನವೊ ||೩||

ಪದ ೪೯ ರಾಗ ಸುರಟಿ ಆದಿತಾಳ

ಏನು ದಾಸಾ ನಾನು ಹರಿಯೆ | ನೀನು ಮೆಚ್ಚುವೇನೊ ||
ಏನು ಮಾಡಿದರೇನು ನಿನ್ನಯ |
ಧ್ಯಾನವರಿದೆನೇನೊ ಹರಿಯೆ || ಪಲ್ಲ ||
ಲೋಕ ವಾರ್ತೆ ಎಲ್ಲಾ ಜರಿದು | ಏಕ ಚಿತ್ತವಿಲ್ಲ ||
ಶಾಕುಪೋಕರ ನೀಕರಿಸಿ ನಿನ್ನ | ಸ್ವೀಕರಿಸಲಿಲ್ಲ ಬಂದೆ ||೧||

ನಿನ್ನ ಮಹಿಮೆಯನ್ನು ಕೇಳಿ ನಿನ್ನ ರೂಪವಿನ್ನು
ಮನದಣಿಯೆನೋ ||
ಧ್ಯಾನ್ನ ಮರೆಯದೆನ್ನ ದಾಸ್ಯವಿನ್ನು ಬರಿದೆ || ೨ ||
ಭಾವ ತಿಳಿಯಲಿಲ್ಲ ಗುರುಗಳ ಸೇವೆ ಮಾಡಲಿಲ್ಲ |
ಧಾವತಿಗೊಂಡೆ ಕೇವಲ ವಾಸುದೇವ ವಿಠಲ ಬರಿದೆ || ೩ ||

ಪದ ೪೦ ರಾಗ ಮೋಹನಕಲ್ಯಾಣಿ ತ್ರಿವಿಡಿತಾಳ

ಅನಂತಾನಂತ ಪಾಪ ಮಾಡುವೆ ನಾನು |
ಅನಂತ ದಯಾ ನಿಧೆ ನೀನೊ ಹಯವದನ || ಪಲ್ಲ ||
ಮೇರು ಮಂದಾರಾದಿಗಳು ದಾರು ಎನ್ನ ಪಾತಕಕ್ಕೆ |
ಸರಿಗಾಣಿಸೆನೆಂದರೆ ಪಾಪಾ | ಕ್ಷೋಣಿ ಪರಿಮಾಣುಗಳಿಗೆ |
ಎಣೆಗಾಣೆ ಜಗದೊಳು | ಗುಣಗಣ ಜಲನಿಧೆ || ೨ ||
ಪೇಳು ಪಾಪಾ ವೆಂದೆನಲು | ಪೇಳಲಿಕ್ಕೆ ಬಲುಲಜ್ಜ |
ಗಾಳು ಅಂಡೊಲಿವು ತಿದೊ ತಿಳಿದಾತ ನೀ ನನ್ನಲ್ಲವೆ || ೩ ||
ಎನಗೊಂದು ಉಪಾಯವ ಅನಾಯಾಸ ಮಾಡುವಂಥ |
ನಿನ್ನ ನಾಮ ಸುಧೆಯನ್ನು ಎನಗೀಯೊ ಮುದದಿಂದ || ೪ ||
ಏಸು ಕಾಲಾ ಸ್ವಾಮಿ ನೀನು | ದಾಸನು ಆಸು ಕಾಲದವ |
ವಾಸುದೇವ ವಿಠಲಾನೆ ನೀ ಸಡಲಾ ಬಿಡುವರೆ || ೫ ||

ಪದ ೪೧ ರಾಗ ಪಾಡಿ ತ್ರಿವಿಡಿತಾಳ

ಚರಣವೆಂಬ ದುರ್ಗವು ದುರ್ಗ ಸೇರಿದೆ |
ಪರವೇನು ಎನಗಿನ್ನು ಅರಿಸೈನ್ಯಗಳಿಂದ || ಪಲ್ಲ ||
ನಿಜಭಕ್ತ ಜನರಿಗೆ ಅಭಯವ ಕೊಡುವಂಥ |
ಧ್ವಜ ಉಳ್ಳ ಪುರವಿದು ಪರರಿಗಸಾಧ್ಯ || ೧ ||
ತನ್ನ ಸೇರಿದ (ನಂಬಿದ) ಇಂದ್ರ ಗಣಪತಿ ಇಹರೆಂದು |
ಚನ್ನ ವಜ್ರಾಂಕುಶ ಧರಿಸಿದೆ ನಿಜ (ನಿಧಿ) ಪೂರ್ಣ || ೨ ||
ರಜವಿಲ್ಲ ತಮವಿಲ್ಲ ನಿತ್ಯ ನಿರ್ಮಲವಿದು |
ಅಜ ಮೊದಲಾದವರು ಇಲ್ಲೆ ಸೇರುವರಯ್ಯಾ || ೩ ||

ಕೆಳಗ ರವಿಯು ಕಾಂತಿ ವ್ಯಾಲಧರ್ಾಶಶಿ ಛವಿ ।
ಸ್ಥಳವಿದೆ ಭಾಗ್ಯಾಭಿಮಾನಿ ದೇವತಿಗೆ ॥ ೪ ॥
ಸವಿಯಾದಾ ನದಿ ಇಲ್ಲಿ ಜನಸಿದೆ ಫಲ ಪದ್ಮ ।
ಯುವ ಮೊದಲಾದ ವಿವೆ (ಗಿವೆ) ವಾಸು ।
ದೇವ ವಿಠಲನ್ನ ಚರಣವೆ ॥ ೫ ॥

ಪದ ೪೨ ರಾಗ ಕಾಂಬೋದಿ ಝಂಪಿ ತಾಳ

ನಿನಗಿಂತ ಮಿಗಿಲಾಗಿ ಕರುಣ ನಿನ್ನದಿರೆ ।
ನಿನಗೇನು ಶರಣಂಬೆ ಕರುಣಕ್ಕೆ ಹರಿಯೆ ॥ ಪಲ್ಲ ॥
ನಿತ್ಯ ಮುಕ್ತಾ ಪೂರ್ಣ ಕಾಮು ಒಂದಕು ಶಿಲುಕದ ।
ಮತ್ತೆ ಇದ್ದ ನಿನ್ನ ತನು ದೀನರಾ ತೊರಿಸೀ ।
ಹತ್ತು ಜನುಮುವ ಕೊಟ್ಟು ಭಕ್ತಜನರಾ ಬಲು ।
ಕೃತ್ಯ ನಿಮಿತ್ಯ ಕೊಡಿಸ್ಯಾಡಿಪಿದನರಿಯಾ ॥ ೧ ॥
ಒಂದಕೂ ಶಿಲುಕದಾ ನಿನ್ನ ವತ್ಸದ ದಾವು ।
ಬಂಧದಿ ಬಿಗಿಸಿತೀ ಗೋಪಿಯು ಕೈಯ್ಯ ॥
ವೃಂದಾರಕರ ಸ್ತುತಿಗೊಶವಲ್ಲದವನ ಗೋಪಾ ।
ಮಂದಿಯಾ ದೂರಿನ ಪಾತ್ರನ್ನ ಮಾಡಿತು ॥ ೨ ॥
ಪೇಳಿಕೊಂಬಿಯೊ ಲೋಕಪೊಡೆಯನು ನಾನೆಂದು ।
ಊಳಿಗತನ ನಿನ್ನ ಕೈಯ್ಯ ಮಾಡಿಸಿತಯ್ಯ ॥
ಕೇಳೊ ಭಕುತರಿನ್ನು ಏನಾಡಿದರನ್ನ ।
ತಾಳಬೇಕಾಯಿತೋ ವಾಸುದೇವ ವಿಠಲ ॥ ೩ ॥

ಪದ ೪೩ ರಾಗ ಶಂಕರಾಭರಣ ಅಟ್ಟ ತಾಳ

ಸಿಲುಕಿದೆನು ಭವ ಪಾಶದಲಿ ನಾನು ಹರಿಯೆ ।
ಕಿಲಿಕಿಲಿ ನಗುವದು ಸಲಹುವದು ಧೊರಿಯೆ ॥ ಪ ॥
ಕೆಲರ ಮಾತಿಗೆ ಪೋಗಿ ಬಲವಾಗಿ ಅವರ ।
ಕೆಲಸ ಮಾಡುವೆ ನಿಜ ಕೆಲಸವ ಮರದೆನಾ (ನಿಜ ಕೆಲಸ
ನಾ ಮರದೆ ॥ ೧ ॥

ಧರಣಿಯ ಪತಿಯೇವೆ ಶರಣೆಂದು ತಿಳಿದು ।
ಮರೆದೆನೊ ನಿನ್ನ ಪಾದ ಸಿರಿಯ ರಮಣನೆ ॥ ೨ ॥
ಉದರಗೋಸುವಾಗಿ ಮರದವರ ವಶದಿ ।
ಹದನವ ಕಳಕೊಂಡು ಮದಡ ನಾನಾದೆನೊ ॥ ೩ ॥
ಉಣವಿನೊ ಪರರನ್ನ ದಣಿವಿನೊ ಅದಕ್ಕೆ ।
ಕುಣಿವೇನೊ ಅವರಂತೆ ಗುಣವೇನು ಎನಗೆ ॥ ೪ ॥
ಈಸು (ಏಸು) ಪರಿಯಲ್ಲಿನ್ನಾ ಶ್ರೀಶಾ ದಾಸರ ವಶದಿ ।
ವಾಸವಿತ್ತು ಬದುಕಿಸೊ ವಾಸುದೇವ ವಿಠಲ ॥ ೫ ॥

ಪದ ೪೪ ರಾಗ ಪಾಡಿ ತ್ರಿವಿಡಿ ತಾಳ

ನಿನ್ನ ಮನಬಂದಂತೆ ವಿಹರಿಸೊ ಸಿರಿಕೃಷ್ಣ ।
ಎನ್ನ ಸ್ವಾಮಿ ನೀ ಎಂದು ಮರುಳಾದೆನಲ್ಲದೆ ॥ ಪಲ್ಲ ॥
ಬೊಮ್ಮ ಮೊದಲು ಸುರೋತ್ತುಮ್ಮಗಳ ಪಾದ ।
ಧುಮ್ಮಿನೊಳು ಮುಳುಗಿಹ್ಯ (ಹೇ) ಎಮ್ಮಯ್ಯ ಕೇಳು ॥ ೧ ॥
ಸರ್ವಜ್ಞನೆಂಬಿಯಾ ಊರ್ವಿಯ ಪತಿಗಳು ।
ಸರ್ವ ಜನಗಳಾ ಪೂರ್ವರೆ ಕಂಡೀಗ ॥ ೨ ॥
ಅಕ್ಷೀಣ ಶಕುತೆಂಬ ದಾಕ್ಷಿಣ್ಯವಿಲ್ಲದೆ ।
ಸುಕ್ಷೀಣ ಜನರನ್ನು ರಕ್ಷಿಪರಯ್ಯಾ ॥ ೩ ॥
ಭಕುತ ವತ್ಸಲನೆಂಬೊ ಭಕುತಿಯು ಎನ್ನಲ್ಲಿ ।
ಯುಕುತವಾಗಿಹ್ಯವು ವ್ಯಕತ ನಿನಗಲ್ಲದೆ ॥ ೪ ॥
ಶರಣರ ಧೊರೆಯೆಂದು ಕರುಣ ಮಾಡುವೆನೆಂಬ್ಯಾ ।
ಸಿರಿ ವಾಸುದೇವ ವಿಠಲ ಕರುಣಿಸಾಲಸ್ಯವ್ಯಾಕೊ ॥ ೫ ॥

ಪದ ೪೫ ರಾಗ ಪಾಡಿ ತ್ರಿವಿಡಿ ತಾಳ

ಎನ್ನಾಗಮವ ಹೀಗಾಯಿತೊ ದೇವ ।
( ಮುನ್ನೇನು ಫಲ ಹೋವು ನೀನೆಯಂತೆ ದೇವ )
ಇನ್ನು ನೀ ಎನ್ನನು ಸಲಹುವ ಬಗೆಯಂತೊ ॥ ಪಲ್ಲ ॥
ಪಕ್ಕಿರಿ ತಾಯೆಂದು ಸಂತಿಗೆ ಕಳುಹಲು ।

ತೆಕ್ಕಡಿ ಲಶುನವ ತಂದ ತರುಳನಂತೆ ॥ ೧ ॥
ಪರಮ ನಿರ್ಮಲವಾದ ತುಲಸಿ ತಾಯೆನೆ ದುಷ್ಟ ।
ತುರುಚಿ (ವಿ) ಯನೆ ತಂದ ತರುಳನಂತೆ ॥ ೨ ॥
ಮಸಿಯ ಮರಸಿಕೊಂಡು (ಮಗವು) ಬಾಯೆನ್ನೆ ಶಿಶು ತಾನೆ ।
ಕೆಸರು ಪೂಶಿಕೊಂಡು ಬಂದ ತರುಳನಂತೆ ॥ ೩ ॥
ಕಳುಹಿದಾ ಪಿರಿಯರು ಹಳಿಯಲಿ ಚಿಂತಿಲ್ಲ ।
ಗೆಳೆಯಾರು ನಗುವ ಚಿಂತಿಯೆ ಘನವೆಲೊ ದೇವ ॥ ೪ ॥
ಆಪ್ತ ಪ್ರಿಯ ಬಂಧು ವ್ಯಾಪಕ ನೀನೆಂದು ।
ಜ್ಞಾಪಕಗೊಳಿಸಿದೆ ವಾಸುದೇವ ವಿಠಲ ॥ ೫ ॥

ಪದ ೪೬ ರಾಗ ಸಾರಂಗ ಝಂಪಿ ತಾಳ

ಈ ಲವವೆ ನಮಗೆ ಸಫಲವು ಕಾಣಿರೊ ।
ಶ್ರೀ ಲಕುಮಿಯ ಪತಿಯ ನೆನೆವೆಯಾಗಿ ॥ ಪಲ್ಲ ॥
ಕೀಳು ಜನರಿಂದ ಆಡುವಾ ನುಡಿಗಳು ।
ಹಾಳು ಹರಟೆಗಳು ಬಹು ಜಾಳು ಮಾತುಗಳು ॥
ಕಾಲ ಜನರುಗಳು ಕೇಳಿ ಪರಿಯರೂ ।
ಸಾಳಿ ನೋಡಿದಂಥ ದಾಸರು ದೊರಿಯರು ॥ ೧ ॥
ವ್ಯಾಳಿ ಬಂದಾಗ ಸಾಧಿಸದಿವನಾ ।
ಬಾಳಿವೆ ಬೋಳಿ ಅದು ಗೋಳಲ್ಲವೆ ॥
ಘಾಳಿ ಬಂದಾ ಕೈಲೆ ತೂರಿಕೊಳ್ಳಿರೊ ।
ವ್ಯಾಲೆ ತನ್ನೊಶವೇನೊ ದೇಶ ಕಾಲಗಳು ॥ ೨ ॥
ಸೋಲಿಸಿ ದುರ್ಮತರ ಕೀಳು ಮಳಗ ? ಪರಿ ।
ಶೀಳಿಸೊ ಪ್ರತಿದಿವಸದಲಿ ॥
ಅಲವ ಬೋಧಕ ಮತವನು ಲೀಲಿಯಾ ತಿಳಕೊಂಬ್ಯಾ ।
ಪಾಲಿಸುವ ದಯದಿಂದ ವಾಸುದೇವ ವಿಠಲ ॥ ೩ ॥

ಪದ ೪೭ ರಾಗ ಕೇದಾರ ಗೌಳ ತ್ರಿವಿಡಿ ತಾಳ

ಅಪರಾಧ ಎನ್ನದ್ದೈಯ್ಯ ಅಪರಿಮಿತವೆ ಸರಿ ।

ಕೃಪಣ ವತ್ಸಲ ಕೃಷ್ಣ ಕೃಪೆಯು ಮಾಡುವದಿಲ್ಲೆ || ಪಲ್ಲ ||
ಹುಡುಗರು ಮಾಡುವ ತಪ್ಪಿಗೆ ಜನನಿ ತಾ |
ಬಿಡುವಳೀ ಆದರಿಂದ ದಯುವ ಮಾಷದಲೀ ||
ನಡವ ಕುದರಿ ತಾನು ಮಲಗಿದಡೆ ಇನ್ನು |
ಕಡೆಗೆ ಕಟ್ಟುವರೇನೊ ತಿರಗಿ ನೋಡದಲೆ || ೧ ||
ಮಾಡುಯೆಂದದರನು ಬಿಟ್ಟರೆ ಅಪರಾಧ |
ಬ್ಯಾಡವೆಂದದರಾನು ಮಾಡುವದಪರಾಧ ||
ಈಡಿಲ್ಲ ನಿನ್ನ ದಯುಯೆಂತೆಂದು ನಾನಿಂದು |
ಮಾಡುವೆ ಬಿನ್ನಪ ನಾಚಿಕಿಲ್ಲದಲೀ || ೨ ||
ಬೇಡಿಕೊಂಬೆನೊ ವಾಸುದೇವ ವಿಟ್ಠಲ ನೀನು |
ನೋಡದಿದ್ದರ ಭಕ್ತ ಜನರು ತಮ್ಮಾ ||
ಬೀಡು ಸೇರಲಿ ಸಾರೊ ಕೇಡೆನೊ ಇದಕಿಂತ |
ನೋಡು ನೀ ಇದರಿಂದ ಕೃಪಣ ವತ್ಸಲ ಕೃಷ್ಣ || ೩ ||

ಪದ ೪೮ ಅಟ್ಟ ತಾಳ

ಪೇಳಬಹುದೊಬ್ಬರಿಗೆ ವ್ಯಾಸನೆ |
ಪೇಳಲು ನಿಮಗೆ ಮಾಡಲಶಕ್ಯವಲ್ಲ || ಪಲ್ಲ ||
ಶ್ರವಣ ಕ್ಷಣಬಿಡದೆ ಮಾಡುವಿಯೆಂದು |
ಶ್ರವಣ ಭವಣೆಯು ಬಲ್ಲರೇ ಬಲ್ಲರೊ ||
ಶ್ರವಣ ಮತಿಯೆಂದು ವಾಕ್ಯದಿಂದಲಿ ನಿಮಗಿ |
ಲ್ಲವರ ಗುರುವಾದಿ ವಾಯು ವಿರಂಚಿಗೆ || ೧ ||
ಮನನ ಮಾಡೆಂದು ಮುಂದಿಗೆ ನೀ ಬೋಧಿಸುವೆ |
ಮನನ ನಿಮಗೆ ಎಂದಿಗೆ ಇಲ್ಲವೊ ||
ಮನನ ಶಾಸ್ತ್ರಗಳ ಮಾಡಿ ಹ್ಯಾಗ ತಿಳಿಯದೊ |
ಮನವೆ ಬಲ್ಲದು ನಿನ್ನ ಮಹಿಮೆ ಎಲ್ಲ || ೨ ||
ಧ್ಯಾನ ಮಾಡೆಂಬಿ ತಾ ವಂದೆರಡು ವಿಷಯುಗಳ |
ಜ್ಞಾನ ಬಿಡಲಾರೆನೊ ಬಹಳ ಬಿಡುವೆ ||

ನೀನು ಒಂದನ್ನ ಒಮ್ಮೆನ್ನ ಬಿಡಲಾರಿಯೊ ।
ಏನೊ ನೀ ಮಾಡುವದು ಮಾತ್ರ ॥ ೩ ॥
ನಿನ್ನ ಖಳ ಗುಣಗಳ ಪರೋಕ್ಷ ನಿಗಮನುದಿನ ।
ಅನ್ಯ ಸಾಧನಗಳಿಂದಲ್ಲದಾಗಿ ॥
ಚನ್ನಾಯಿತೋ ನಿಮ್ಮ ನಿತ್ಯ ಮುಕುತಿ ಪೂರ್ಣತಾ ।
ಅನ್ಯ ಜನರಿಗೆ ಬಂದ ದಣುವು ತಿಳಿಯೊ ॥ ೪ ॥
ಏಸು ತಾನಂದರು ಖರಿಯು ಪುಶಿಪೊಂದಿಲ್ಲ ।
ಲೇಸು ಕೊಡುವವನೊಬ್ಬನಿಲ್ಲ ॥
ವಾಸುದೇವ ಪಿಟ್ಠಲವೊಲಿದು ಸಜ್ಜನರಿಂದ ।
ಈಸು ಸಾಧನಗಳಿಂದ ನೀ ಮಾಡಿಸೊ ॥ ೫ ॥

ಪದ ೪೯ ಅಟ್ಟ ತಾಳ

ಇದನೆ ಬೇಡುವೆನಯ್ಯಾ ಒದಗಿ ಪಾಲಿಸೊ ಜೀಯ್ಯ ।
ಬದಲು ನಾನೊಲ್ಲೆಸೊ ವಿದಿತ ವೇದ್ಯ ॥ ಪಲ್ಲ ॥
ಕ್ಷಣ ನಿನ್ನ ಬಿಡಲಾರೆ ನಿನ್ನವರನು ಬಿಡೆ ।
ಕುಣಿಕುಣಿವೆನು ನಿನ್ನ ಜನರೆಂದರೆ ॥
ಗುಣತ್ರಯ ವಾರಣ ನಿನ್ನ ವಾರುತಿಯಿರೆ ।
ಒಣ ಹರಟೆಗಳ ನಾ ಕೇಳಲೊಲ್ಲೆ ॥ ೧ ॥
ನೀಚ ಜನರಂಗಳ ಸಂಗವ ಕೊಡದಿರು ।
ವಾಚದಿಗನ್ಯರಿಗಾಲ್ಪರಿಸಬ್ಯಾಡ ॥
ಸೂಚಿಸು ನಿನ್ನಯ ಗುಣಗಣಂಗಳೆವೆ ನಾ ।
ಯಾಚಿಪೆ ಇದನೆ ಇದನೆ ಮುರಾರಿ ॥ ೨ ॥
ಶ್ರೀಶ ನಿನ್ನಯ ಕಥೆ ಕೇಳದೆ ಬಹಳಾಯು ।
ಕಾಸು ವಂದದಕೆ ಅವನೇವೆ ಜೀವಿಯೊ ।
ಕಾಸು ಬಾಳದು ಕೇಳು ಕರುಣಾಬ್ಧಿಯೆ ।
ತಾಸು ಒಂದಾದರು ಅವನೆ ಸುಜೀವಿಯೊ ।
ವಾಸುದೇವ ವಿಠಲ ನಿನ್ನವರವನೊ ॥ ೩ ॥

## ಐತಿಹಾಸಿಕ

ಪದ ೫೦ ರಾಗ ಕಾಂಬೋದಿ ಝಂಪಿ ತಾಳ

ಉಸರಬಹುದೆನಗೆ ಕೃಷ್ಣ ಬಾಗಿಲಲಿ ನಸು
ನಗುತ ನಿಂತ ಬಗೆಯು || ಪಲ್ಲ ||
ತಿಳಿದು ಪೂಜಿಯು ಮಾಡುವಾ ಭಕತರನ |
ಬಳಗೆ ಕರವುವ ತೀವ್ರವೊ ||
ಖಳ ಕುಲದ ಜನರು ಬರಲು ಹೋಗೆಂದು |
ಕಳಹುವ ಬಗೆಯು ಏನೋ ಕೃಷ್ಣಾ || ೧ ||
ಸುಳಿದ ಜನರಗಳ ಕೂಡ ಸುಂಕವನು |
ಶಳಕೊಂಬ ಬಗೆಯು ಏನೊ ||
ಕೆಳದಿಯರ ಬಂದವರನಾ ಮೋಹಿಸಿ |
ಕೊಳಲನೂದುತಲಿ ನಿಂದಿಯಾ ಕೃಷ್ಣ || ೨ ||
ಬಲಿಯು ಕಾಯಿದ ಬಗೆಯಲಿ ದಾಸರನ |
ಚಲಿಸದಲೆ ಕಾವ ಬಗಿಯೊ |
ನೆಲೆ ವಾಸುದೇವ ವಿಠಲಾ ಭಕತನ್ನ |
ಸಲಿಗೆ ಬಿನ್ನಪ ಸಲಿಪದೊ || ೩ ||

## ಐತಿಹಾಸಿಕ, ದಶಾವತಾರ ಸ್ತೋತ್ರ

ಪದ ೫೧ ರಾಗ ಕಾಂಬೋದಿ ಝಂಪಿ ತಾಳ

ಹೇಳುತಿ ಕೇಳುತಿ ಏನಿಲ್ಲವೊ |
ಆಳಿದಾ ಊಳಿಗನ ಬಾಳವಿನ್ನೇನೊ || ಪಲ್ಲ ||
ನೀರೊಳಗೆ ತಿರುಗಿ ನೀ ಭಾರ ಬೆನ್ನಿಲಿ ಪೊತ್ತು |
ದೂರೊಳಗೆ ಮುಣುಗಿ ಭೂಭಾರ ನೆಗಹೀ ||
ಧೀರ ಕರ್ನವು ಮಂದವೊ ಹ್ಯಾಗೊ ತಿಳಿಯದು |
ಘೋರ ದೈತ್ಯನ ಕೊಲ್ಲೊ ಚೀರಾಟವೊ || ೨ ||
ಮೇದಿನಿ ಪತಿಯು ತುತಿಸುವ ಭರಧಿ |
ವೇಧನುರ್ವೇದಗಳ ನೊದೀಸುವ ನಿರ್ಭರವೊ ||

ಕಾದುವ ರಾಕ್ಷಸರ ಕುಲದ ಕೂಗ್ಯಾಟವೊ ।
ಮೋದದಿ ಗೋಪಿಯರ ಕೋಲಾಟವೊ ॥ ೨ ॥
ಬತ್ತಲೆ ನಿಂತು ನುಡಿಯಲಿ ಬಾರದೊಯೆಂತೊ ।
ಹತ್ತಿದ ವಾಜಿಯು ನಿಲ್ಲದೇನೊ ॥
ಇತ್ತ ಬಾರೊ ವಾಸುದೇವ ವಿಟ್ಠವರೇಯ ।
ಮತ್ತೆ ಹೇಳೊ ನಿಲ್ಲೊ ಬಾಯೆಂತಲೆನ್ನ ॥ ೩ ॥

ಪದ ೫೨ ಝುಂಪಿ ತಾಳ

ಅರಗೊಡವೆ ನಿನಗ್ಯಾಕೆಲವೊ ।
ವೀರ ಶ್ರೀ ನರಹರಿಯು ಧೊರೆಯಾಗಿರೆ ॥ ಪಲ್ಲ ॥
ಹಾದಿ ಹೋಗುವ ಸುದ್ದಿಗಳು ಕೇಳಿ ಕೇಳಿನ್ನು ।
ಮೋದಿಸುವಿ ಖೇದಿಸುವಿ ಚಿಂತಿಸುವಿ ॥
ಕಾದ್ಯಾಡುವವನಲ್ಲ ಕಟ್ಟುವವ ನೀನಲ್ಲ ।
ಆದಾಯ ಇನಿತಿಲ್ಲ ಅವನಾಯುವಿಲ್ಲ ॥ ೧ ॥
ಪಾಮರ ಜನರು ನಿನ ಪಾಲಿಗೆ ಬಿದ್ದಿನ್ನು ।
ಕಾಮಿತವ ಬೇಡೆ ನೀ ಪಚ್ಚಿಕೊಳದೆ ॥
ಸ್ವಾಮಿಗೆ ಒಪ್ಪಿಸೆಲೊ ಆತನೆ ಅದನು ಬಲ್ಲ ।
ನೀ ಮನುಜ ಮಾತ್ರ ನೀನೇನು ಬಲ್ಲೊ ॥ ೨ ॥
ಭೂಸುರಾನಂದ ತೀರಿಥ ಕೃತಿ ಪೇಳುವ ।
ಭೂಸುರ ಜನರು ಸುಖದಿಂದಿರಲೆನ್ನು ॥
ವಾಸುದೇವ ವಠಲ

(೧॥ ಪಾದ ಕಡಿಮೆ ಅದೆ)

ಪದ ೫೩ ರಾಗ ಮುಖಾರಿ ತ್ರಿವಿಡಿ ತಾಳ

ಬಡವನ ಮನೋರಥ ಪೂರೈಸು ಸಿರಿ ಕೃಷ್ಣ ।
ಒಡೆಯ ನೀನಲ್ಲದೆ ಪೂರೈಸುವರಿಲ್ಲ ॥ ಪಲ್ಲ ॥
ಕಿವಿಯು ನೀಡಿದುದಕೆ ಎನಗೊಮ್ಯಾದರು ಮನೋ ।
ಕುವರಿಯ ಭೃತ್ಯತನ ಕೊಡು ಕಂಡ್ಯ ॥

ಸುವಿಮಲತರ ಮತಿಯಾದ ವಿಷ್ಣುರಾತೋ ।
ದ್ಭವನ ಬಳಿಯಲೊಮ್ಮೆ ನಿಲಿಸಯ್ಯ ಹರಿಯೆ ॥ ೧ ॥
ನಯನವು ಕೊಟ್ಟದಕೆ ಎನ್ನೊಮ್ಮೆ ಗಣದಿ ವಿ ।
ಜಯನ ಬಳಿಯಲೊಮ್ಮೆ ನಿಲಿಸಯ್ಯಾ ॥
ಭಯದಿ ಸೂತರ ಸುಮ್ಮನಿಹ ಭೀಷ್ಮಕ ಕುರುಪ ।
ತಿಯರ ಸಭೆಯಲೊಮ್ಮೆ ನಿಲಿಸಯ್ಯಾ ಹರಿಯೆ ॥ ೨ ॥
ರಸನವು ಎನಗಿನ್ನು ಕೃಪೆ ಮಾಡಿದುದಕೆ ಗೋ ।
ರಸವ ಕದ್ದು ಮೆಲುವ ಕಾಲದಲ್ಲಿ ॥
ಇಸಕೊಂಬ ಗೋವಳರ ವೊಳಗ ಎನ್ನನು ಒಬ್ಬ ।
ಶಿಶುವಿನ ಮಾಡಿ ಪುಟ್ಟಿಸು ಕಂಡ್ಯ ಹರಿಯೆ ॥ ೩ ॥
ಎನಗೆ ತ್ವಗೇಂದ್ರಿಯವ ದಯಮಾಡಿದದಕಿನ್ನು ।
ಜನತ ಭೀಷ್ಮನ ಸುತಿಯು ಕರಕಂಜದಿ ॥
ಅನುವಾದಿಷ್ಟಕ ಭಾವ ಸರಯು ಯಮುನಾ ತೀರ ।
ಜನಿಕವಾಳುಕ ಭಾವವನು ಕೊಡು ಹರಿಯೆ ॥ ೪ ॥
ನಾಶಿಕವು ಇತ್ತದಕೆ ಗೋಪಿಯ ವಿಹಾರದಿ ।
ವಾಸುದೇವ ವಿಠಲ ನಿನ್ನ ಕೊರಳೊಳಿದ್ದಾ ॥
ಸೂಸಿ ಬಿದ್ದಾ ಮಾಲಿಕೆಯ ಕುಸುಮಂಗಳ ಬಲು ।
ವಾಸನ ಲೋಲುಪ ಮಧುಕರ ಭಾವ ನೀಡೋ ॥ ೫ ॥

## ಯತ್ಯಾಶ್ರಮ ನಂತರ ದೇವರ ಪ್ರಾರ್ಥನಾ

ಪದ ೫೪ ರಾಗ ಪಾಡಿ ತ್ರಿವಿಡಿ ತಾಳ

ದೇವ ನೀನುಪಕಾರ ಅಪಾರ ಮಾಡಿದೆ ।
ಕಾವ ಕರುಣಾ ಸ್ವಭಾವ ಕೇಳು ಪೇಳುವೆ ॥ ಪಲ್ಲ ॥
ನವಯುವತಿ ಶಿಲೆ ಕೊರಳಿಗೆ ಕಟ್ಟಿಕೊಂಡು ।
ಭವ ಸಾಗರದೊಳು ಮುಣಿಗಿ ಪೋಗುವ ನಾ ॥
ಅವಸರಕೊದಗಿ ಪಿಡಿದು ದಡ ಸೇರಿಸಿ ।
ದವನಾಗಿ ಎಚ್ಚರಿಕೆ ತಂದಿತ್ತೆ ದಯಾಳೊ ॥ ೧ ॥

ಭಾರ ತಾಳದುಯೆಂದು ಸೂತ್ರವೂ ಶಿಖಿಯೊ ನಿ ।
ವಾರಿಸಿ ತನುವಿಗೆ ಲಘುವು ಮಾಡಿದಿಯೇ ॥
ಭಾರಮುಯುತಾ ರಜ್ಜು ಮನಕೆ ಸುತ್ತಿದೆ ಆಶಾಂ ।
ಕೂರ ಕೇಶಗಳು ಬೆಳದಿವೆ ಪರಿಹರಿಸು ॥ ೨ ॥

ಲಕ್ಷಿ ಇಲ್ಲದೆ ಅನ್ನ ಮೊದಲಾಗಿ ಕೊಡುವಂಗೆ ।
ಶೀಕ್ಷಿಸಿ ಗರ್ವವು ಕಳದು ಈಗ ॥
ಭಿಕ್ಷುಕನ ಮಾಡಿದೆ ನಿನ್ನನೆ ಬೇಡುವೆ ।
ಲಕ್ಷ್ಮೀಪತಿಯೆ ಅಂತರಂಗದ ಗೃಹಸ್ಥ ॥ ೩ ॥

ಏಳು ಮನೆಗಳನ್ನು ಕೇಳೋದು ಯತಿಧರ್ಮ ।
ಏಳಲಾರಿನೊ ವೃದ್ಧ ಕೇಳಲಾರೆ ॥
ಕೇಳುವೆ ನಿನ್ನನೇ ಏಳು ಭಿಕ್ಷವ ನೀಡು ।
ಬಾಳುವೆ ಬಹುಕಾಲ ನಿನ್ನ ಕೊಂಡಾಡುತ ॥ ೪ ॥

ಶ್ರೋತ್ರಕ್ಕೆ ನಿನ್ನ ಕಥೆ ನಾಸಕ್ಕೆ ನಿನ ಗಂಧ ।
ನೇತ್ರಕ್ಕೆ ನಿನ್ನ ರೂಪ ರಸನಿಗೆ ನಾಮಾಮೃತ ।
ಗಾತ್ರಕ್ಕೆ ನಿನ್ನ ಪಾದಸ್ಪರುಶ ಮನೋಬುದ್ಧಿ ।
ಮಾತ್ರಕ್ಕೆ ಗುಣಕರ್ಮ ಕೊಡು ವಾಸುದೇವ ವಿಠಲ ॥ ೫ ॥

## ಐತಿಹಾಸಿಕ, ದತ್ತಮಕ್ಕಳು ಗೋಪಾಲಕೃಷ್ಣಾಚಾರ್ಯರಿಗೆ ಬಂದ ಅಪಮೃತ್ಯು ಪರಿಹಾರವಿ॥ ಪ್ರಾರ್ಥನೆ

ಪದ ೫೫ ರಾಗ ಕಾಂಬೋದಿ ಝಂಪಿ ತಾಳ

ವಿನಯದಲಿ ವಿಜ್ಞಾಪನವ ಮಾಡುವೆ ಈ ।
ತನಯನ್ನ ಪರಿಪಾಲಿಸುವದೆಂದು ನಾನು ॥ ಪಲ್ಲ ॥

ನಿನ್ನವನು ಮೊದಲಿಗೂ ಇವನೆಂದು ಬಲ್ಲೆಲ್ಲ ।
ಜನ್ನಿಸಿ ಇಹನು ಎನ್ನಲ್ಲಿ ಮತ್ತೂ ॥
ಧನ್ಯನಾಗುವ ಮಧ್ವ ತಂತ್ರಗಳನೋದಿನ್ನು ।
ಅನ್ಯನಲ್ಲವೊ ಇವನು ನಿನಗೆ ಎಂದೆಂದು ॥ ೧ ॥

ಕೇಳಿಧಾಗಿವ ತನ್ನ ಶಿಷ್ಯರಿಗೆ ಶಾಸ್ತ್ರಗಳ ।

ಪೇಳಿ ಪೆಸರಿತ್ತಿಹ ಲೋಕದೊಳಗೆ (ಆಳಲಿ ಇವನಿಂದು) ।
ಆಳಿದಾ ನೀನೆಂದು ನಾಮಗಳು ರಚಿಸುತ ।
ಬಾಳಲಿ ಬಹುಕಾಲ ಗೋಪಾಲದಾಸ ॥ ೨ ॥
ಏಸು ಜನರಿಗೆ ಎನ್ನಿಂದ ನೀ ಪೇಳಿಸಿದಿ ।
ಲೇಸು ಲೇಸೆಂದು ಲೋಕದಿ ಮೆರಸಿದ್ಯೊ ॥
ಈ ಸುತನಯು ಎನ್ನತೆರ ನಿನ್ನವನೆಂದರಿತು ।
ವಾಸುದೇವ ವಿಠಲ ಕಾಪಾಡೊ ಕರುಣಿ ॥ ೩ ॥

## ಐತಿಹಾಸಿಕ

ಪದ ೫೬ ರಾಗ ಕಾಂಬೋದಿ ಝಂಪಿತಾಳ

ಆರಿಗ್ಯಾತಕೆ ಮೊರೆ ಇಡಲೀ ।
ಸಾರಿದವರನ ಪೊರೆವ ಶ್ರೀರಮಣ ನೀನಿರಲು ॥ ಪ ॥
ಬೆಳಸಿಗೊಬ್ಬನ ಕೇಳೆ ಮಳೆಗೆ ಮತ್ತೊಬ್ಬನೆ ।
ಅಳತಿಗೆ ಇನ್ನೊಬ್ಬನೇ ಹಾಗವೇ ।
ವಳತಿಗೊಬ್ಬರು ದೊರೆಗಳೇ ವ್ಯಾಲೆನ್ನ ।
ಪ್ರಳಯಕೆ ಮತ್ತೊಬ್ಬನೇ ಪರಿಪರಿ ।
ಖಳರ ಮಾತುಗಳೇ ಸ್ವಾಮಿ ॥ ೧ ॥
ಆಕಾಲ ನೀನೆವೆ ಈ ಕಾಲದಲಿ ನೀನೆ ॥
ಸಾಕುವನು ಇನ್ನೊಬ್ಬನೇ ಸ್ಥಿರವಾಗಿ ।
ತಾಕುತಗಲಿಲ್ಲದಲೆ ಬೊಮ್ಮಾದಿ ।
ಲೋಕ ಪತಿಗಳ ಒಡೆಯನೇ ಈ ವ್ಯಾಳ್ಯ ।
ಲೋಕರನಕಾಯಬೇಕೋ ಸ್ವಾಮಿ ॥ ೨ ॥
ಕಾಸು ಒಬ್ಬರಿಗಿಲ್ಲ ಲೇಸು ತೋರದ ಲೇವೆ ।
ದೇಶಕೊಬ್ಬರು ಪೋದರೋ ಪೊಟ್ಟೆಗೆ ॥
ಕೂಸುಗಳ ಮಾರುಂಡರೊ ಈ ಜನರ ।
ಕ್ಲೇಶಬಡಿಸದಲೆ ಪೊರಿಯೊ ಕರುಣದಲಿ ।
ವಾಸುದೇವ ವಿಠಲಾಸ್ವಾಮಿ ॥ ೩ ॥

## ಪ್ರಾರ್ಥನೆ

ಪದ ೫೭ ರಾಗ ಕೇದಾರ ಗೌಳ ತ್ರಿವಿಡಿತಾಳ

ನಾಲಿಗೆ ತುದಿಯಲ್ಲಿ ರಾಮ ಎಂಬೋನಾಮ ।
ವ್ಯಾಳಿಗೆ ವೊದಗಿಸೋ ಹರಿಯೇ ಮರಿಯೆ ॥ಪಲ್ಲ॥
ಕಾಲನ ದೂತರು ಕಠಿಣರಿ ಸರಿ ।
ವ್ಯಾಳಿಯು ಹೇಳಿ ಕೇಳಿ ಬರುವದಲ್ಲ ॥
ಆಲಯದವರ ಶಕುತಿಯಲ್ಲೆನೋ ।
ಲಾಲಿಸಬೇಕೆನೊ ಎನ್ನ ಬಿನ್ನಪ ॥ ೧ ॥
ಕಾಲನ ಸ್ಥಿತಿಯೆಂತು ಮೇಷದ ಗುಂಪಿಗೆ ।
ತೋಳದ ಪರಿಯೆಂದು ನಾ ಕೇಳಿ ಬಲ್ಲೆ ॥
ಕಾಳು ಕಪಟಿ ತಿಂಬಾ ಮೂಷಕಗಳಿನ್ನು ।
ಕಾಲ ಭುಜಂಗದಂತೆ ಕಂಡು ಬಲ್ಲೆನೊ ॥ ೨ ॥
ಹೇಸಿ ವಿಷಯವೆಂಬಾ ಮಡಿವಿನೊಳಗೆ ವೈದು ।
ಮೋಸಗೊಳಿಸುವ ಸ್ಥಿತಿಯು ಮನಸಿನ ॥
ವಾಸುದೇವ ವಿಠಲ ಈಪರಿ ತಿಳದಿನ್ನು ।
ಈ ಸಮಯಕೆ ನಾಮ ವದಗಿಸಯ್ಯಾ ॥ ೩ ॥

## ತಿರುಪತಿಯಲ್ಲಿ ವೆಂಕಟೇಶನನ್ನು ಪ್ರಾರ್ಥಿಸಿದ್ದು

ಪದ ೫೮ ಯರಕಲ ಕಾಂಬೋದಿ ಝಂಪಿತಾಳ

ಯಾತವರ ನಾನಲ್ಲವೊ ಹರಿ ಬರಿದೆ ।
ಖ್ಯಾತಿಯನು ತಂದಿತ್ತಿಯಾ ॥ ಪಲ್ಲ ॥
ಮಾತುಗಳು ನಾಲುಕಾಡಿ ಸಭೆಯೊಳಗೆ ।
ಪ್ರೀತಿ ಬಡಿಸುವೆನೊ ನರರಾ ॥ (ಜನರಾ)
ರೀ (ನೀ) ತಿಯಲಿ ಶ್ರುತಿ ಸ್ಮೃತಿಗಳ ಪಠಿಸಿ । ಶ್ರೀ ।
ನಾಥ ನಿನ್ನ ತೋಷಿಸಿದೆನೆ (ಮೆಚ್ಚಿಸಿದಿನೆ) ॥ ೧ ॥
ಜಪ ಮಣಿಗಳನು ತಿರುಹಿಸಿ ಲೋಕರನ ।
ಕಪಟಗೊಳಿಸುವೆನಲ್ಲದೇ ॥

ತಪ ಮಾಡಿದೆನೆ ಮನದಲಿ ನಿನ್ನಯಾ ।
ಕೃಪೆಯು ಉದಿಸುವ ತೆರದಲಿ ॥ ೨ ॥
ದಾಸವೇಷವ ಧರಿಸಿದೆ ಕನಕದಾ ।
ವಾಸನೇಯಿಂದಲ್ಲದೇ ॥
ವಾಸುದೇವಾ ವಿಠ್ಠಲಾ ಶರಣತಾ ।
ಲೇಶವರಿಯನು ಕರುಣಸೋ ॥ ೩ ॥

## ಐತಿಹಾಸಿಕ, ಆರ್ತ ಪ್ರಾರ್ಥನಾ

ಪದ ೫೯ ರಾಗ ಪೂರ್ವಿ ಆದಿ ತಾಳ

ಕಾಯೊ ಕಾಯೊ ಕಾಮಿತ ಫಲದ ಕಾಯೊ ಕಾಯೊ ॥ ಪಲ್ಲ ॥
ಕಾಯೊ ಕಾಯೊ ಎನ್ನ ಕಾಯುಜನ್ನೈಯ್ಯನೆ ।
ಕಾಯುದಿದ್ದರೆನ್ನ ಕಾವವರಾರೊ ॥ ಅ ಪಲ್ಲ ॥
ಎಂದೆಂದಿನ ಕರ್ಮಗಳೆಣಿಸುತಲಿ ।
ಕಂದಿಸಿ ಕುಂದಿಸಿ ಬಂಧಿಪರೇನೋ ॥ ೧ ॥
ತಾಳಲಾರೆ ಈ ಕಾಲಿನ ಬಾಧೆಯು ।
ಬೀಳುವೆ ನಿನ್ನಯ ಕಾಲಿಗೆ ಸ್ವಾಮಿ ॥ ೨ ॥
ಆಲಸ ಮಾಡದೆ ಆರ್ತಿಗಳೋಡಿಸಿ ।
ಪಾಲಿಪದೆನ್ನನು ಪಾವನ ಮೂರ್ತೆ ॥ ೩ ॥
ಮಾಡಿದ ಪಾಪಗಳೋಡಿಸಿ ಸುಖದಿಂ।
ದಾಡಿಸು ಕಣ್ಣಿಗೆ ಕಾಣಿಸಿಕೊಂಡು ॥ ೪ ॥
ವಾಸುದೇವ ವಿಟ್ಠಲ ನೀ ಎನಗಿನ್ನು ।
ವಾಶ ಮಾಡಿಸಿ ಕೀರ್ತಿಯು ಪಡೆಯೊ ॥ ೫ ॥

## ಐತಿಹಾಸಿಕ, ಮಕ್ಕಳ ವಿ॥ ಪ್ರಾಥನಾ

ಪದ ೬೦ ರಾಗ ಕಾಂಬೋದಿ ಝುಂಪಿತಾಳ

ತಿಳುಪಿದೆನು ಪರಮ ದಯದಿಂದ ।
ತಿಳುಪಿದೆನು ಪರಮ ದಯದಿಂದ ಮುಂದಣಕಾರ್ಯ ।
ಒಳಿತು ಬಿನ್ನಪವ ಲಾಲಿಸಲಿ ಬಹುದಯ್ಯಾ ॥ ಪಲ್ಲ ॥

ಸಕಲ ದೇಶ ಕಾಲದಲ್ಲಿಪ್ಪ ಸಜ್ಜನರ ।
ಸಕಲ ಪರಿಯಲಿಂದ ಪೊರವದಾತ ॥
ಅಕಳಂಕ ನರಸಿಂಹ ನಿನ್ನ ಹೊರತಿಲ್ಲೆಂದು ।
ಸಕಲರೂ ಪೇಳಲು ಕೇಳ ಬಲ್ಲೆ ॥ ೧ ॥
ಇನ್ನಾರು ತರುವಾಯ ದಶಮತಿಯ ರಾಗವುವ ।
ಚನ್ನಾಗಿ ಪೇಳುವೆನೆಂಬದೊಂದು ॥
ನಿನ್ನ ವಚನಂಗಳು ಪುಶಿಯಾಗ ಬಾರದೂ ।
ಮನ್ನದಲ್ಲಿ ನೋಡಿಕೋ ಕರುಣಾ ಸಿಂಧೊ ॥ ೨ ॥
ಬಡವಗೆ ಮಾತುಗಳು ಕೊಟ್ಟೆನ್ನು ತಾವಾಗಿ ।
ಒಡೆಯರೀ ತಪ್ಪಿದರೆ ಏನಂಬರೊ ॥
ಮಡಿಯ ಹೊರಳುವೆ ನಿನ್ನ ಅಡಿಗೆ ಬೀಳುವೆ ಸ್ವಾಮಿ ।
ಕಡೆಹಾಯಿಸೊ ರಂಗ ಎನ್ನಂತರಂಗ ॥ ೩ ॥
ಜನನಿ ಕಾಣಲು ಕಣ್ಣು ಕಿವಿಯು ಕೇಳಲು ಅಣ್ಣ ।
ತನಯರೂ ಇಂದಿಗೂ ಜನಿಸಲಿಲ್ಲ ॥
ಮನದಲ್ಲಿ ಹಲವು ಹಂಬಲಗಳೋಲ್ಯಾಡುತಿವೆ ।
ಜನಕ ಜನನೀ ತನಯ ಎನಗೆ ನೀನೆ ॥ ೪ ॥
ಅಸು ಲೋಕಗಳೆಲ್ಲ ನಿನ್ನವೆ ಸರಿ ಸ್ವಾಮಿ ।
ವಾಸುದೇವ ವಿಠಲ ಬಹು ಕಾಲದಿ ॥
ಭೂಸುರನ ಮಾಡಿ ಪುಟ್ಟಿಸಿದರೆ ಚಿರಕಾಲ ।
ಈ ಸುಧಾ ಪಾನ ನೀ ಮಾಡಿಸೆನಗೆ ॥ ೫ ॥

## ಐತಿಹಾಸಿಕ, ಭಕ್ತನ ವಿ॥ ಪ್ರಾರ್ಥನಾ

ಪದ ೬೧ ರಾಗ ಕಾಂಬೋದಿ ಝಂಪಿ ತಾಳ

ಬೋಧಕರಾರೊ ಲೋಕದೀ ದಾಸಗೆ ।
ಬಾಧಿಪ ದುರಿತಗಳ ದೂರ ಮಾಡಿ ॥
ಮಾಧವಾ ನೀನೆನೆ ದಯವು ಮಾಡಲಿ ಬೇಕೊ ।
ಸಾಧಕಾ ಸಾಧ್ಯನೊ ನೀನು ಸ್ವಾಮಿ ॥ ಪಲ್ಲ ॥

ಓದಲೂ ವೊದಲಿಲ್ಲ ಕೇಳಿ ಶಾಸ್ತ್ರಗಳಿಲ್ಲ ।
ವೋದಿಸುವ ಮಾತ್ರ ಭಕ್ತರ ಕಡು ।
ವೋದ ತೀರ್ಥರ ಮತಾ ಇವನಿಗೆ ತಿಳುವಂತೆ ।
ನೀ ದಯವನು ಮಾಡಿ ಕರವ ಪಿಡಿಯೊ ॥ ೧ ॥
ಆಲಸಬಟ್ಟನು ಇವ ನಿನ್ನ ಪೂಜಿಗೆ ತಕ್ಕ ।
ಕೆಲಸವ ಮಾಡಲು ವೊದಲರಿಯಾ ॥
ಒಲಿಸಬೇಕೆಂದು ಮನದಿ ಹಂಬಲಿಸುವ ।
ಚಲಿಸದಾ ಮನ ಮಾತ್ರಕೆ ಕೊಡಲಿಬೇಕು ॥ ೨ ॥
ದಾಸರಾ ಸಾಧನದ ಭಾರ ನಿನ್ನದು ಸ್ವಾಮಿ ।
ಆಸರಾಗಲಿ ಬೇಕು ಒಬ್ಬರಿಗೆ ॥
ದಾಸ ಮತ್ತೊಬ್ಬ ಎಂದು ನಿನ್ನಯ ಕ್ಲಪ್ತ ।
ವಾಸುದೇವಾ ವಿಠಲ ನೀನರಿಯದೇನೊ ॥ ೩ ॥

ಪದ ೬೨ ರಾಗ ಕಾಂಬೋದಿ ಝಂಪಿ ತಾಳ

ಸಣ್ಣವನ ಬಿನ್ನಪವ ಸಲಿಸಬಹುದೈಯ್ಯ ।
ಬಣ್ಣಿಸಲೊಶವಲ್ಲ ದಯವುಳ್ಳ ಧೊರೆಯೆ ॥ ಪಲ್ಲ ॥
ನಿನ್ನ ಗುಣ ಸುರ ತರುವು ವನದಿ ಶುಕಾದಿಗ ।
ಳುನ್ನತಾವಾಗಿಹವು ಉಚಿತವೇ ಸರಿಯೂ ॥
ಎನ್ನ ಮನ ಕೋಡಗವು ಅಡವಿಯನು ಬಿದ್ದದೆ ಇ ।
ದನ್ನ ಆದರೊಳಗ ಇಡಬಹುದೈಯ್ಯ ಹರಿಯೆ ॥ ೧ ॥
ಕಮಲಭವ ವಾಣಿ ಮುಖ ನಯನಗಳು ಎಂಬೊ ಮಹ ।
ಕಮಲೋತ್ಪಲಗಳಿಂದ ಶೋಭಿಸುತಿಹ ॥
ವಿಮಲ ಲಾವಣ್ಯ ಸುಧಾಂಬುಧಿಯೊಳಿಡಿಸಯ್ಯಾ ।
ಮಮ ನೇತ್ರ ಮೀನಗಳ ವಿಷಯ ಪಂಕದಿ ತೆಗಿಸು ॥ ೨ ॥
ನಿಮ್ಮ ನಾಮಾಮೃತದ ಸೂರೆಯನು ಬಿಟ್ಟು ಶ್ರೀ ।
ಬೊಮ್ಮ ಭವ ಮುಖರ ಕೆರೆ ಕೋಡೇರಿಸುವಿ ॥
ಈಮ್ಮನುಜ ತುತಿ ಚೂರ್ಣ ತೆಗೆದು ತೊಳದು ತುಂಬೊ ।

ನಮ್ಮ ವದನ ಕರಡಿಗೆಯಾ ವಾಸುದೇವ ವಿಠಲ ॥ ೩ ॥

ಶ್ರೀಗುರು ಮಧ್ವೇಶಾರ್ಪಣಮಸ್ತು

## ತಂದೆ ವಾಸುದೇವವಿಠಲ

ಪದ (೧) ೬೩ ರಾಗ ತಾಳ

ನೀರೆ ನೀರಜನಯನನ ತೋರೆ ।
ಮಾರನ ಪಿತನ ತೋರೆ ॥ ಪಲ್ಲ ॥
ನೀರ ಒಳಗೆ ಬೆನ್ನಿಲಿ ಭಾರಪೊತ್ತತಿಶೂರ ।
ಮೋರೆದಿರುಹಿ ನೆಲಸ ವಿ। ದಾರಿನರಹರಿಯಾತೋರೆ ॥ ೧ ॥
ಪೋರನಾದೀ ಒಂದು। ಮೀರಿದ ಗಗನವ ಕ್ರೂರ ನೃಪರಗೆಲಿದು।
ಹರೀಗುಣ್ಣದೆ ವನಚಾರಿಯಾಗಿದ್ದವನ್ನ ತೋರೆ ॥ ೨ ॥
ಮಾವನ್ನಕೊಂದು ಬತ್ತಲೆ । ದೇವಹಯವೇರಿದನ್ನ ।
ಕಾವಾನು ತಂದೆ ವಾಸುದೇವ ವಿಠ್ಠಲತಾನೆ ॥ ೩ ॥

ಪದ (೨) ೬೪ ರಾಗ ಕಾವೇರಿ ಆದಿತಾಳ

ನಮಗ್ಯಾಂಗ ಶ್ರೀಹರಿ ದಯಮಾಡ್ಯಾನು ।
ಭಾಗವತ ಜನಕ ಬಾಗಿನಮಿಸದವ ಹ್ಯಾಂಗ ॥ಪಲ್ಲ॥
ಯೋಗಿಕುಲವರನೆ ಭಾಗವತಾದಿಸದಾ ।
ಆಗಮಗಳನನು ರಾಗದಿ ಪೊಗಳ್ದವಗ ಹ್ಯಾಂಗ ॥ ೧ ॥
ಶಕ್ತಿ ಮೀರಿ ಗುರುಭಕ್ತಿ ಪೂರ್ವಕ ಹರ ।
ಭಕ್ತಿಯಿಲ್ಲದೆ ಕುಯುಕ್ತಿವಂತಗ ॥ ೨ ॥
ದಾಸದಾಸನಂತೆ ಈಶಗ ಮೊರೆ ಇಡೆ ।
ಸೂ ಸುಖಕೊಡುವ ತಂದೆ ವಾಸುದೇವನು ॥ ೩ ॥

ಪದ (೩) ೬೫ ರಾಗ ಆದಿತಾಳ

ಉದ್ಧರಿಸೊ ಮುಹರಾಯ ಮಧ್ವಾಂತರ್ಗ ಉದ್ಧವ ಪ್ರೀಯ
॥ ಪಲ್ಲ ॥
ಬಿದ್ದಿಹೆ ಸಂಸಾರಾಬ್ಧಿಯೊಳಗೆ ತಾನೆದ್ದೆನೆಂದರೆ ಪದ್ಧತಿ ಕಾಣೆ
ನ್ನುದ್ಧರಿಸೊ ಮುಹರಾಯ ॥ ೧ ॥

ಇದ್ಧರಿಯೊಳಗೆ ಪುಟ್ಟಿದದಕಿನ್ನು ಮಧ್ವ ಶಾಸ್ತ್ರದಲಿ
ಕೊಟ್ಟೆನ್ನುದ್ಧರಿಸೊ ಮಹರಾಯ ॥ ೨ ॥

ಕರ್ಮಕಾಲಫಲ ಊರ್ಮಿಯೊಳಗೆ ನಾ ।
ನಿರ್ಮಲ ಕಾಣೆನೊ ಶರ್ಮವೆಕೊಟ್ಟೆನ್ನುದ್ಧರಿಸೊ ॥ ೩ ॥

ಚಿನ್ನನ ಬಿನ್ನಪ ಮನಕೆ ತಂದು ।
ಬನ್ನ ತರಿಪ ಪಥವನ್ನು ತೋರಿಸೆನ್ನುದ್ಧರಿಸೊ ॥ ೪ ॥

ದಾಸನ ಬಿನ್ನಪ ಏಸು ಎನ್ನದೇ ತಂದೆ ।
**ವಾಸುದೇವಪೊರಿ** ಈ ಸಮಯದಿ ಎನ್ನುದ್ಧರಿಸೊ ॥ ೫ ॥

ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥



ಶ್ರೀ ವ್ಯಾಸತತ್ವಜ್ಞರು

ಐಜಿ ಸ್ವಾಮಿಗಳವರು

# ಶ್ರೀ ವಾಸುದೇವ ವಿಠಲರ

## ಮಹಿಮಾ ಸ್ತೋತ್ರ ಪದಗಳು

ಶ್ರೀ ವ್ಯಾಸತತ್ವಜ್ಞರ ಸ್ತೋತ್ರ ಶ್ಲೋಕಗಳು

### ಶ್ರೀ ಅಡವಿಸ್ವಾಮಿಗಳವರು ಮಾಡಿದ ಶ್ಲೋಕ (೬೬)

ದಿಕ್ ಪ್ರಾಂತಾತತ ಪುಣ್ಯಕೀರ್ತಿ ಸುಲತಾ ।
ಸಂಶೋಭಿತ ಸ್ಸಂತತಂ ॥
ನಾನಾ ಶಿಷ್ಯ ತದೀಯ ಶಿಷ್ಯ ವಿಲಸಚ್ಛಾಖೋಪ ಶಾಖಾನ್ವಿತಾಃ॥
ಐಜೀವೆಂಕಟ ನಾರಸಿಂಹ ದಯಿತಾದಿವ್ಯಾಲ ವಾಲೋದ್ಭವಃ ॥
ಸಂಭೂಯಾತ್ ಸಕಲೇಷ್ಟದೋ ಮಮಸದಾ ರಾಮಾರ್ಯ
ಕಲ್ಪದ್ರುಮಃ ॥೧॥

ಇನ್ನೊಬ್ಬ ಜ್ಞಾನಿಗಳು ರಚಿಸಿದ ಸ್ತೋತ್ರ

ಪ್ರಣಮಾಮಿ ಶ್ರೀವ್ಯಾಸತತ್ವಜ್ಞತೀರ್ಥಂ
ಪ್ರಣತ ಜನತಾಽ ಭೀತಿ ವಿತರಣ ಸಮರ್ಥಂ ॥
ಭುವನೇಂದ್ರ ಪಾದಪಂಕಜ ಪೂಜಕವರಂ ।
ಭುವನೇಂದ್ರ ವರಕುಮಾರಕ ಮರವಿದೂರಂ ॥

॥ ಗೋಪಾಲ ವಿಠ್ಠಲಕೃತ ॥

ಪದ ೨ (೬೭) ರಾಗ ಕಲ್ಯಾಣಿ ಝಂಪಿತಾಳ

ಕಂಡೆ ಕರುಣಿಗಳೊಳಗೆ ಅಗ್ರೇಸರ ಪಾದ ।
ಪಂಡಿತ ರಾಮಾರ್ಯರಾ ।
ಕೊಂಡಾಡಲಿವರನ ಎಷ್ಟರವ ನಾನು ।
ಕಂಡೆ ಎನ್ನಮನ ಕುತ್ಸಹವಾಗಿ ॥ ಪಲ್ಲ ॥
ಸಿರಿ ವೆಂಕಟನರಸಿಂಹಾಚಾರ್ಯರೆಂಬ ।
ವರಕ್ಷೀರ ಶರಧಿಯಲ್ಲಿ ।
ಪರಮಶೋಭಿತ ಚಂದ್ರನಂತೆ ಉದ್ಭವಿಸಿ-ಸುಜ

ನರಿಗೆ ಆಹಲ್ಲಾದವಾಗಿ ।
ವರವೇದ ಶಾಸ್ತ್ರಗಳನೋದಿಸಿ ಶಿಷ್ಯಜನಕೆ ।
ವರದೊರದು ಉಪದೇಶಿಸಿ ।
ಮರಿಯಾದೆ ಒಂದು ಕ್ಷಣ ಬಿಡದೆ ಹರಿಪರರಾಗಿ ।
ಇರುವ ಮಹಸುಗುಣರನ್ನು ಇಂದು ॥ ೧ ॥
ಚರಣವೆಂದರೆ ಇವರ ಚರಣವೆಸುಖಕರ ।
ಹರಿಯಾತ್ರಾ ಪರವಾಗಿನ್ನು ।
ಕರಗಳೆಂದರೆ ಇವರ ಕರವೆ ಮಂಗಳಕರ ।
ಹರಿಪೂಜೆಯಲ್ಲಿ ಸತತ ॥
ಕರನಗಳು ಮುಂತಾದ ಸರ್ವೇಂದ್ರಿಯಗಳಿಂದ ಹರಿಯನ್ನೆ
ವಿಷಯಕರಿಸೀ ।
ಇರುವ ಅನುಭೋಗವು ಇರತೋರಿ ತಮ್ಮ ನಿಜ-
ಕುರುಹನೋಡೆಂದು ಚಪ್ಪರಿಸಿ ಬಿಗಿದಪ್ಪಿದುದ ॥ ೨ ॥
ಏಸು ಜನ್ಮದ ಸುಕೃತ ಎನಗಿವರ ಕರುಣಉಪ್ಪ ।
ದೇಶ ಸ್ವಪನದಿ ಆದುದಾ ।
ಕೇಶವನೆ ಈ ರೂಪದಿಂದ ಪೇಳಿದನ್ಯಾಗೊ ಲೇಶನಾ ಅರಿದಪಲ್ಲ॥
ದಾಸಗುರು ವಿಜಯರಾಯರೆ ಇಲ್ಲಿ ನಿಂದೆನ್ನ ಪೋಷಿಸುವ
ಬಗೆಯು ಹ್ಯಾಗೋ ।
ವಾಸುದೇವ ಹಯಾಸ್ಯಗೋಪಾಲ ವಿಠಲನ ।
ದಾಸರೊಳುತ್ತಮರ ದಯಕೆ ಸರಿಯುಂಟೆ ॥ ೩ ॥

## ವ್ಯಾಸ ತತ್ವಜ್ಞರ ಅವತಾರತ್ರಯ ಸ್ತೋತ್ರ

ಪದ ೩ (೬೮) ರಾಗ ಕಾಂಬೋದಿ ಝಂಪಿತಾಳ

ವ್ಯಾಸರಾಯರು ನಿತ್ಯ ಶ್ರೀ ಶಂರ್ಪಿತೋದನ ।
ಏಸಂದು ಭಾಂಡಗಳ ಆ ಅಸುನಾಳಿಗೆ ಇಡಿಸೆ ।
ತಾಸಿಷ್ಯನಾ ನೈವೇದ್ಯ ಸಮರ್ಪಣೆಗೆ ।
ಲೇಸಾಗಿ ತಂಧಿಡಿಸೆ ॥

ತಾಶಂಖೋದಕವ ಪ್ರೋಕ್ಷಿಸಿ ಚಿಂತಿಸಿ ಬಿಸಿ ಬಿಸಿಯನ್ನ
ಭೂಮಿಸುರರಿಗುಣಿಸಿದ ॥ ೧ ॥
ಗುರುರಾಘವೇಂದ್ರರಾಯರು ಸರ್ವದೇಶಸಂ ।
ಚರಿಸೆ ಕುಂಭಕೋಣದಿ ಇರುವ ಜನಕೆ ।
ಪರತರವಾದ ಶಾಸ್ತ್ರವ ।
ಒರದೊರದು ಪೇಳುತಲಿರಲೂ ॥
ವರಕೃಷ್ಣದ್ವೈಪಾಯನರು ತೆರಳಿ ಪೋಪದುಕಂಡು ।
ಕರಮುಗಿದು ಕೇಳ್ದ ಉತ್ತರವ ತಿಳಿಸಿದಾತ ॥ ೨ ॥
ಪರಮ ಮೇಧಾವರವೆಂಕಟ ನರಹರಿಯಾ ।
ರ್ಯರ ಸತ್ಪುತ್ರರೆನಿಸಿ ।
ಬರದೋದದಲೇ ಮರುತ ಶಾಸ್ತ್ರವರದಾ ಶಾಸ್ತ್ರಗಳ ।
ಪರತತ್ವರಹಸ್ಯ ತನ್ನಲ್ಲಿರುವ ಶಿಷ್ಯಜನಕೆ ।
ಅರುಹಿ ಕರುಣದಿಂದ ಪೊರವನಮ್ಮ ॥ ೩ ॥

ವರದ ಗೋಪಾಲ ವಿಠ್ಠಲ ಕೃತ

## ಶ್ರೀ ವ್ಯಾಸ ತತ್ವಜ್ಞರ ಪೂರ್ವಜನುಮದ ಇತಿಹಾಸ

## ಉಗಾಭೋಗ ೪. (೬೯)

ದಾಸ ಪುರಂದರರ ದಯಕೆ ಪಾತುರರಾದ ।
ವಾಸುದೇವ ವಿಠಲನ್ನ ದಾಸರ ।
ಲೇಸಾಗಿ ಭಜಿಸುವ ಭಾಗ್ಯವನು ಕೊಡುಸದಾ ।
ಸೂಸಿ ಸುಖಉಂಬ ಸುರಲೋಕದಕಿಂತ ।
ಈ ಸುಗುಣ ಗುರು ತಿಲಕ ಶಿರೋರತುನ ।
ವ್ಯಾಸಮುನಿ ಪದಕಂಜ ಭಜಕರೆನಿಪ ।
ಶ್ರೀಶ ಗುರು ಕೃಷ್ಣನ ಭಜಕರ ಸಮೀಪದಲಿ ।
ವಾಸಮಾಡಿಸೊ ವರದಗೋಪಾಲ ವಿಠಲರೇಯ ।
ಲೇಸು ಇದಕಿಂತ ಇನ್ನೊಂದಿಲ್ಲವೊ ॥ ೧ ॥

## ವರದಗೋಪಾಲ ವಿಠಲ ಕೃತ

ಪದ ೫ (೬೦) ರಾಗ ಸೌರಾಷ್ಟ್ರ ತ್ರಿವಿಡಿ ತಾಳ

ಮಾನುನಿ ಈ ಮಹತ್ಮ ದ್ವಿಜವರ ಆವರೊ ತಿಳಿಯಬೇಕೆಲವೆ
|| ಪಲ್ಲ ||

ಜ್ಞಾನಿವೆಂಕಟ ನೃಸಿಂಹಾರ್ಯ್ಯರ ಸೂನವೊ ಉದಿತ ಸು ।
ಭಾನವೊ ಜನಿತ ಕೃಶಾನವೊ ನತಸುರಧೇನವೊ ||
ಜಾನಕೀಜಾನೇಯನ ಪದಕಮಲ ।
ಧೇನಿಪ ದಿನದಿನ ದೀನದಯಾಳೋ || ಅ. ಪಲ್ಲ ||

ಹಿಂದೆಮಾಡಿದ ಸುಕೃತ ಫಲವೆ ।
ಬಂದೊದಗಿ ಮುನಿವರನ ಪಾದ ।
ದ್ವಂದಗಳ ಸೇವಿಯು ದೊರವದಿದು ಭಂಧವೊ ಪರಮಾ ।
ನಂದವೊ ಸುಖಕಾಸ್ಪಂದವೊ । ಜ್ಞಾನದ ಕಂದವೊ ||
ವಂದಿಪ ಜನರಿಗೆ ನಂದವನೀಡುತ ।
ಅಂದಿಂದೆನ್ನಾನು ಪೊಂದಿಹ್ಯರೆನಗೆ ||೧||

ನಿತ್ಯ ನೈಮಿತ್ಯಗಳು ದಿನದಿನ ।
ಸತ್ಯವಾಕು ಸತ್ಕ್ರೀಯಗಳೆಲ್ಲವು ।
ಹೊತ್ತು ಹೊತ್ತಿಗೆ ಹರಿಯು ಪೂಜಿಪ ।
ಭಕ್ತರೊ ಇವರತಿ ಶಕ್ತರೊ ।
ಶಾಸ್ತ್ರಾಸಕ್ತರೊ । ಜೀವನ್ಮುಕ್ತರೊ ||
ಅತ್ತಿತ್ತೋಡದೆ ತತ್ತ್ವಳವಿಲ್ಲದೆ ಸತ್ವ ಶ್ರೀಹರಿ ಗುಣ ಬಿತ್ತರಿಸು
ವರೊ || ೨ ||

ಹರಿಪರಾತ್ಪರ ಸಿರಿವಿರಂಚರು ಪರಮ ಪ್ರೀಯರೆಂದು ।
ತರತಮ ಪರಿಪರಿ ಬಗೆಯಿಂದ ಪೇಳುವ ಧೀರರೊ ।
ಜ್ಞಾನಗಂಭೀರರೊ । ದಾನದಿ ಶೂರರೊ ।
ವಾದಿಶೈಲಕೆ ಹೀರರೊ ||

ವೀರ ಶ್ರೀ ವರದಗೋಪಾಲ ವಿಠಲನ ।
ಮೂರುತಿ ಮನದಲಿ ತೋರುವರಿವರೊ ॥ ೩ ॥

ಪದ ೬ (೭೧) ರಾಗ ಕಾಂಬೋದಿ ಝಂಪೆತಾಳ

ಪೂರ್ವ ಜನ್ಮದ ಪುಣ್ಯಫಲವೊ ।
ಸರ್ವದಾ ವ್ಯಾಸತತ್ವಜ್ಞರ ಬಳಿಯವಾಸಾ ॥ ಪಲ್ಲ ॥

ಗಂಗಾದಿ ತೀರ್ಥಗಳು ಮಿಂದಫಲವೇನೋ ಶ್ರೀ ।
ರಂಗಾದಿಗಳಲಿ ಬಹುದಿನ ವಿದ್ದೆನೋ ॥
ಮಂಗಳಾತ್ಮಕರಾದ ಮಾರರಮಣನ ಭಕ್ತರನ್ನ ।
ಕಂಗಳಿಂದಲಿ ದಿನದಿನದಿ ಕಾಂಬುವದು ॥ ೧ ॥

ಸ್ನಾನ ಜಪ ವ್ಯಾಖ್ಯಾನ ಮಾನಸದಿ ಹರಿ ।
ಧ್ಯಾನವನು ಮಾಡುತಾನಂದದಿಂದ ॥
ಮೀನಕೂರುಮ ವರಹ ನೃಸಿಂಹಾದಿಗಳ ।
ಅನಂತ ಮೂರ್ತಿಗಳ ಧೇನಿಪರಸಂಗವನು ॥ ೨ ॥

ಪರಮ ಭಕುತಿಯಲಿ ಶ್ರೀ ಹರಿಯ ಗುಣಗಳ ನೆನದು ।
ಪರವಶದಲ್ಲಿ ವೈಮರದು ಕೃಷ್ಣಾ ॥
ನರಹರಿ ಹರಿಯೆಂದು ಹರಿಹರಿದು ಕುಣಿವ ಶ್ರೀ ।
ಪರಮಹಂಸರ ಪಾದಶರಣವಾಗಿಹದು ॥ ೩ ॥

ಏಸು ದಿನವಿದ್ದರೂ ಬ್ಯಾಸರದೆ ನಿಜರನ್ನ ।
ಪೋಷಿಸುತ ಪರಮ ಸಂತೋಷದಿಂದ ॥
ವಾಸುದೇವ ಹಯಾಸ್ಯ ದಾಸರಿಗೆ ಸಮವಾದ ।
ಏಸೇಸು ಸುಕೃತಿಗಳ ಕಾಣೆಲೋಕದಲಿ ॥ ೪ ॥

ಪರಲೋಕ ಚಿಂತೆ ಇಲ್ಲದ ಪಾಮರನ ನೋಡಿ ।
ಪರಮಕರುಣದಲಿಂದ ಕರದುತಂದು ॥
ವರದ ಗೋಪಾಲ ವಿಠಲನ ವರಗುಣಗಳನು ।
ಒರದೊರದು ಪೇಳುತಿಹ ಗುರು ಶಿರೋಮಣಿ ಸಂಗ ॥ ೫ ॥

ಪದ ೭ (೭೩) ರಾಗ ಪೂರ್ವಿ ಅಟ್ಟತಾಳ

ಪಂಕಜಾಕ್ಷಿ ಕೇಳಿದ್ಯಾ ಪಂಕಜ ಗಂಧಿ ।
ವೆಂಕಟರಾಮಾರ್ಯರ ಮಹಾಮಹಿಮೆಯು ॥ ಪ ॥
ಅಪಮೃತ್ಯು ಅಪರಿಮಿತದ ಪಾಪಗಳೆಲ್ಲ ।
ಅಪರೋಕ್ಷ ಜ್ಞಾನಿಯು ಕೃಪೆಮಾಡೆ ಪೋಪವು ॥ ೧ ॥
ಇವರ ಬಿಟ್ಟವ ಕೆಟ್ಟ ಇವರಲ್ಲಿದ್ದವಗೆದ್ದ ।
ಇವರ ಕರುಣಕೆ ಪಾತ್ರನೆ ಮಹಾ ಪಾತ್ರನು ॥ ೨ ॥
ಆಧಿವ್ಯಾಧಿ ಸರ್ವ ಬಾಧೆ ಭಯಂಗಳು ।
ಮೋದಿ ಕೃಷ್ಣನ ವಾರ್ತೆ ಬೋಧಿಸೆ ದಹಿಪವು ॥ ೩ ॥
ಮನಕನುಭವ ಅನುಪಮ ಮಹಾ ಮಹಿಮರ ।
ಮನಕೆ ಬಂದವನೆ ಸುಮನಸ ನೆಂದೆನಿಸುವ ॥ ೪ ॥
ಪರಮಾತ್ಮ ತಾನೆ ಪ್ರತ್ಯಕ್ಷ ಮಾತಾಡದೆ ।
ನಿರುತದಿ ಇವರಲ್ಲಿ ನಿಂತು ಮಾತಾಡುವ ॥ ೫ ॥
ಚಿಂತಿಸುತಿಪ್ಪರ ಚಿಂತಿತಾರ್ಥಗಳೆಲ್ಲ ।
ಚಿಂತಾಮಣಿಯಂತೆ ಸಂತೈಸುತಿದ್ದಾರೆ ॥ ೬ ॥
ವರದ ಗೋಪಾಲ ವಿಟ್ಠಲ ಇವರಲಿ ನಿಂತು ।
ವರವ ಕೊಡುವೆನೆಂದು ಕರವುತಲಿದ್ದಾನೆ ॥ ೭ ॥

ಪದ ೮ (೭೪) ರಾಗ ಪಂತುವರಾಳಿ ಅಟ್ಟ ತಾಳ

ಪೊಗಳಲೊಶವೆ ಪುಣ್ಯಚರಿತನಾ ಈ ರಾಮಾರ್ಯರ ನಾ ।
ಬಗೆಬಗೆಯಲಿ ನಗಧರನ್ನ ನಿಗಮಗಳಿಂದ ತುತಿಪನ್ನ ॥ ಪಲ್ಲ ॥
ವೆಂಕಟ ನರಸಿಂಹಾರ್ಯರ ತನಯ ।
ವೆಂಕಟ ರಾಮಾರ್ಯಾಭಿಧೇಯ ।
ಬಿಂಕವಾದಿ ವಾರಣ ಕೇಸರಿ ।
ಸಂಖ್ಯೆಯಿಲ್ಲದೆ ಮೆರವ ಶೌರಿ ॥
ಮಂಕುಮತಿ ಕುಧರಕೆ ಕುಲಿಶನ ಸುಜನಸಾಕರ ।
ಪಂಕಜಕೆ ಪರಮ ಮಿತ್ರನ ಭಕ್ತ ಜನರ ।
ಸಂಕಟಗಳ ಕಳೆವ ಶಕ್ತನಾ ಈ ರಾಮಾರ್ಯರನ ॥ ೧ ॥

ಜ್ಞಾನಪೂರ್ವಕ ಸ್ನಾನ ವಿಹಿತ ।
ದಾನ ಜಪ ಸುಮೌನದಿಂದ ।
ನಾನಾ ರೂಪ ಹರಿಗುಣ ಕ್ರೀಯ ।
ಧೇನಿಸುತ್ತ ಪ್ರವಚನದಲಿ ॥
ಗಾನಲೋಲ ಪರಮ ಧನ್ಯ ನಾ ಜನರೊಳಗೆ ಪ್ರ ।
ವೀಣನೆನಿಸಿ ಮೆರವ ಮಾನ್ಯನ ಜಗಕೆ ಸುಧಾ ।
ಭಾನುನಂತೆ ಪೊಳೆವ ಶಾಂತನ ಈ ರಾಮಾರ್ಯರ ನಾ ॥ ೨ ॥
ವರದ ಗೋಪಾಲ ವಿಟ್ಠಲ ಒಲಿಮೆಯಿಂದ ।
ಆರತ ಜನಕೆ ಧರಿಯು ಕಾಮಧೇನು ಕಲ್ಪ ।
ತರು ಸುಚಿಂತಾಮಣಿಗಳಂತೆ ।
ವರಗಳಿತ್ತು ಮೆರವ ಮಹಿಮನ ॥
ಅರಿಷಡ್ವರ್ಗ ಕೇಸರಿಗೆ ಶರಭನೆನಿಪ ।
ಧೀರನಾ ದಾಸಗುತ್ತಮ ।
ಗುರು ಶ್ರೀ ಹಯವದನನ ಭಜಕನ ಈ ರಾಮಾರ್ಯರನ ॥೩॥

ಪದ ೯ (೬೪) ರಾಗ ಮಾರವ ಅಟ್ಟತಾಳ

ಕರುಣಿಗಳೊಳಗತಿ ಕರುಣಿ ರಾಮಾರ್ಯರ ।
ಚರಣವೆ ಶರಣೆನ್ನಿರೊ ।
ಅರಮರೆ ಇಲ್ಲದೆ ಅಲವಬೋಧರ ।
ಕರುಣ ಪಾತ್ರ ವಿಚಿತ್ರ ಚರಿತರೊ ॥ ಪಲ್ಲ ॥
ಕರುಳಾರೆನ್ನಯ ವ್ಯಾಲಿದುರುಳ ಸುದ್ದಿಯ ಪೇಳೆ ।
ಪರಮ ಧೇಯುವ ವೊಹಿಸಿ ।
ಕರದು ಕೇಳಲು ಎನ್ನ ಮನ ಕರ ಚರಣಗಳು ।
ಥರಥರನೆ ನಡುಗಲು ಪರಮಾಂತಃಕರುಣ ಪೂರ್ವಕ ।
ಪೊರೆದರೆನ್ನತಿ ಪ್ರೇಮದಿಂದಲಿ ॥ ೧ ॥
ಪೋಷಿಸುತಿಹನು ಸರ್ವೇಶ ನಿನ್ನನು ಸದಾ ।
ಯೋಷಿತ ಜನರ ಕೂಡ । ಭಾಷಣೆಗಳನು ಬಿಡು ।
ಬಿಡೆಲೋ ನ ।

ಮ್ಮಾಶಿಷಗಳಲೀಷಿತದಿಂದಲೆ । ತೋಷ ಬಡು ನಿನ್ನಯ ।
ಸುಶೀಮುಖಿ ಕೃಷ್ಣಗೆ ಯರಗಲೆಂದರು ॥ ೨ ॥
ಕೂಡು ನಮ್ಮಲ್ಲಿ ಮಾತಾಡು ವರಗಳನು ।
ಬೇಡು ನೀಡುವೆವೆಂದರೊ ।
ಮೂಢ ಜನರೊಳಗಾಡಿದಲೆ ಕೊಂ ।
ಡಾಡು ಶ್ರೀಹರಿ ಗುಣಗಣಂಗಳ ॥
ಗಾಢ ಭಕುತಿಯು ನೋಡಿದೆವು ನಿನ ।
ಗೀಡೆ ಈ ಜನರೆಂದು ನುಡಿದರು ॥ ೩ ॥
ಹಿಂದಿನ ಜನುಮದ ಸಂಬಂಧವು ನೆನಪಿಗೆ ।
ತಂದ ಕಾರಣದಿಂದಲೀ ।
ಮಂದ ಮತಿಗಳು ನುಡಿದ ಮಾತುಗ ।
ಳೊಂದು ಮನಸಿಗೆ ತಾರದಲೆ ದಯ ।
ದಿಂದ ವೀಕ್ಷಿಸಿ ಕಂದನೇ ನೀ ।
ಮುಂದಕ್ಕೆ ಬಾರೆಂದು ನುಡಿದರು ॥ ೪ ॥
ಪರಮ ಪುರುಷ ವಾಸುದೇವ ಹಯಾಸ್ಯನ್ನ ।
ಪರಮ ಪ್ರಿಯರು ಸ್ವಪ್ನದಿ ।
ಸಿರಿವರದ ಗೋಪಾಲ ವಿಠ್ಠಲ ।
ಪರನೆನುತ ಪರಿಪರಿಯ ನಗೆಯುಲಿ ॥
ಒರದೊರದು ಪೇಳಿದರೆನಗೆ ಸುಖ ।
ಭರಿತವಾಯಿತು ಗುರು ಶಿರೋಮಣಿ ॥ ೫ ॥

ಪದ ೧೦ (೭೫) ರಾಗ ಕಾಂಬೋದಿ ಝಂಪೆ ತಾಳ

ಏಸು ಜನುಮದ ಸುಕೃತ ಫಲವೋ ।
ವಾಸುದೇವನ ದಾಸರೆನ್ನ ಕೈವಿಡಿದಿಹದು ॥ ಪಲ್ಲ ॥
ಗಂಗೆ ಮೊದಲಾದ ಉತ್ತುಂಗ ತೀರ್ಥಂಗಳಲ್ಲಿ ।
ಹಿಂಗದಲೆ ಮಿಂದು ಸೇವಿಸುತಿದ್ದೆನೊ ॥
ಮಂಗಳಾತ್ಮಾ ನಿನ್ನ ಸಂಗಿಗಳ ಪದ ಪದುಮ ।

ಸಂಗದಲಿ ಪರಮ ಪುಂಗಳವಾಯಿತೆನಗೆ ॥ ೧ ॥
ಸಕಲ ಸಚ್ಛಾಸ್ತ್ರಗಳ ಸಾರವನು ತಿಳಿದು ನಾ ।
ಅಕುಟಿಲಾತ್ಮರಾ ಕೂಡಿ ಆಡಿದ್ದೆನೊ ॥
ಪ್ರಕಟವಾಯಿತು ಈಗ ಅಖಿಳ ಜನರಿಗೆ ನೋಡಾ ।
ಲಕುಮಿೀಶ ನಿನ್ನ ದಯ ನಿಕರಕೇನಂಬೆ ॥ ೨ ॥
ಹಿಂದಿಣಾನಂತ ಪಾಪಗಳು ಬೆಂದೋಡಿದವೊ ।
ಮುಂದಣಾನಂದ ಫಲರೂಪವಾಗೀ ॥
ಬಂದೊದಗಿ ತೆನಗೆ ಭಾಗ್ಯದ ಸುಸಂಪದವು ನಿ ।
ನ್ನಿಂದೆ ಶ್ರೀವರದಗೋಪಾಲ ವಿಠ್ಠಲ್ಲಾ ॥ ೩ ॥

ಪದ ೧೧ (೬೬) ರಾಗ ಶಂಕರ ಭರಣ ಆದಿತಾಳ

ವ್ಯಾಸ ತತ್ವಜ್ಞರಿಗೆ ಮಂಗಳಂ ನರಕೇಶರಿ ಪ್ರಿಯಗೆ ಶುಭ
ಮಂಗಳಂ ॥ ಪಲ್ಲ ॥
ಪೊಸಬಿಗಿ ಶಾಟಿಯು ದಂಡ ಕಮಂಡಲ ।
ಎಸೆವ ಮುದ್ರಿದ್ವಾದಶ ನಾಮಾ ।
ಬಿಸರುಹ ನೇತ್ರಗೆ ಕಂಬುಕಂಠ ತುಳಸೀ ಮಾಲೆಯು ಶೋಭಿಸು
ವವರಿಗೆ ॥ ೧ ॥
ನಿರುತದಿ ತನ್ನನು ನೆರೆನಂಬಿದ ನರ ।
ದುರಿತಾದ್ರಿಯ ಪವಿಧರನಂತೆ ।
ಶರಣರಿಗೀಪ್ಸೀತ ಗರೆವನ ಧರೆಯೊಳು ।
ಸುರಧೇನು ತರುವಿನ ತೆರದಿ ॥ ೨ ॥
ಅರಿದರಾದಿಧರ ಷೋಡಶ ಕರಗಳ।ಶರಣು ಪ್ರಲ್ಹಾದನ ಶರಣನಿಗೆ।
ಗುರುಭುವನೇಂದ್ರ ಶ್ರೀ ವ್ಯಾಸ ತತ್ವಜ್ಞರ ।
ವರದ ಗೋಪಾಲ ವಿಠಲ ಧೊರಿಗೆ ॥ ೩ ॥

ತಂದೆ ಗೋಪಾಲವಿಠಲ ಕೃತ ಶ್ರೀ ವ್ಯಾಸ ತತ್ವಜ್ಞರ ಸ್ತೋತ್ರ

ಪದ ೧೨ (೬೭) ರಾಗ ಭೈರವಿ ತ್ರಿವಿಡಿತಾಳ

ಸ್ಮರಿಸುವೆ ಗುರುಗಳ ಸ್ಮರಿಸುವೆ ।
ಸ್ಮರಿಸುವೆನು ವ್ಯಾಸ ತತ್ವಜ್ಞರ ।

ನಿರುತದಲಿ ಪರಮ ಭಕುತಿಲಿ ।
ಶರಣ ಜನರಘದುರಿತ ತಿಮಿರಕೆ ।
ಸರಸಿಜಾಪ್ತನ ತೆರದಲಿ ಪ್ರತಿ ॥ ಪಲ್ಲ ॥

ಭೂಮಂಡಲದಲ್ಲಿ ಬಹುವಿಧ ಗ್ರಾಮಗಳ ನಾಲೋಚಿಸಿ ಈ ।
ಸೋಮಪುರದಲಿ ಸೋಮಕುಲಜನ ।
ತಾಮರಸಪದಗಳನು ಬಿಡದಿಹ್ಯ ।
ಪ್ರೇಮ ಅತಿಶಯ ಪಡೆವ ಪದವಿಯ ।
ನಾಮಹಾಮನದೊಳಗೆ ಪೇಕ್ಷಿಸಿ ।
ಯಾಮ ಪ್ರಥಮದಲಿಟ್ಟದೇಹವ ।
ಯಾಮಿನಿಪತಿ ಪೋಲ್ವಸುಮುಖನ ॥ ೧ ॥

ಮಂಗಳಾಂಗ ಶ್ರೀ ವಾಸುದೇವ ನೃಸಿಂಗ ತುರಂಗವದನ ಶು ।
ಭಾಂಗ ವಿಠಲನ ಪಾದಪದುಮಾ ಅಂಗುಲಿಗಳನು ।
ಹಿಂಗದಲೆ ಹೃದಯಾಂಗಣದೊಳು ನಿಲಸಿ ಪೊಲಿಸಿಹ್ಯ ॥
ಭಂಗಬಡಿಪ ದೋಷಂಗಳೋಡಿಪ ।
ಕಂಗಳಿಂದಲಿಕಂಡೆ ನಾನು ತ ।
ರಂಗನಿಚಯ ಸು ತುಂಗತೀರದಿ ॥ ೨ ॥

ಸಖಸಖರು ಸಖಿಸಖಿಯರೆಲ್ಲರು ।
ಪ್ರಕಟದಲಿ ಕರಮುಕುಳ ಭಾವದಿ ।
ಅಕುಟಿಲಾತುರರಾಗಿ ಅನುದಿನ ಸಕಲ ಕಾಲದಿ ಸೇವೆಮಾಡಲು ।
ಸುಕುಮಾರರು ಸುಜ್ಞಾನ ಭಾಗ್ಯ ದೊ ।
ರಕುವದು ಧರೆಯೊಳಿಲ್ಲಕಾಲದಿ ।
ಸುಖಮುನಿದಯ ನಿಕರದಿಂದಲಿ ।
ನಿಖಿಳ ಜನರಿಗೆ ಸುಖವನೀವರ ॥ ೩ ॥

ನಾಗಶಯನನು ಇವರು ಮಾಡಿದ ।
ಯೋಗವೆ ಮೊದಲಾದ ಸಾಧನ ।
ಕೀಗನಾ ನಿನ್ನನು ಕೊಡಲಂ ।
ದ್ಯಾಗ ಚಿಂತಿಸಿ ಮನಸಿನವೊಳಗೆ ।

ಜಾಗರೂಕನಾಗಿ ನಿಂತನು ।
ರಾಗದಿಂದಲಿ ಇವರ ಬಳಿ ।
ಈಗ ಬಗೆಬಗೆ ಬಂದ ಜನರಿಗೆ ।
ಜಾಗು ಮಾಡದ ಭೀಷ್ಟಕೊಡುವರ ॥ ೪ ॥
ಮಂದಜಾಸನ ಕಂದು ಗೊರಳಮರೇಂದ್ರ ।
ವೃಂದಾರಕ ಸುವಂದ್ಯನ ।
ಛಂದದಲಿ ಹೃನ್ಮಂದಿರದೊಳಗೆ ।
ಧಿಂಧಿಮಿ ಧಿಮಿಕೆಂದು ಕುಣಿಸುವ ।
ತಂದೆ ಗೋಪಾಲ ವಿಠಲನ ಪಾದ ।
ಹೊಂದಿದವರನ ಪೊರೆವುದಕೆ ತಾ ।
ನಿಂದ ನಮ್ಮಯ ಕುಂದುತರಿವ ಮು ।
ನೀಂದ್ರ ಗುಣಗಣ ಸಾಂದ್ರರನುದಿನ ॥ ೫ ॥

ಪದ ೧೩ (೭೮) ರಾಗ ಕಾಂಬೋದಿ ಝಂಪಿತಾಳ

ಏಸು ಜ್ಞಾನಿಗಳಿನ್ನು ಇವರ ಸರಿಯೆ ॥
ವಾಸುದೇವನ ದಾಸ ವ್ಯಾಸ ತತ್ವಜ್ಞರಿಗೆ ॥ ಪಲ್ಲ ॥
ಮಹಿಯೊಳಗೆ ಇವರು ಮಾಡಿದ ಸಾಧನವು ಪೇಳ ।
ಲಹಿರಾಜಗೊಶವೆ ಅನಂತ ಮುಖದಿ ॥
ಮಹದಾದಿ ದೇವನಂ ಘ್ರಿಸರೋಜಧ್ಯಾನರುಚಿ ।
ಗೃಹ್ಯೋಕ್ತಿ ಮಾರ್ಗದಲಿ ಬಾರದೆ ಹೃತಿಯಾದ
( ಬಿಡದೆ ಯತಿಯಾದ ) ॥ ೧ ॥
ಒಂದು ಧರ್ಮವ ಮಾಡಲಾರಂಭಿಸಲು ಜನಕೆ ।
ಬಂದೊದಗುವದು ವಿಘ್ನ ತತಿಗಳಿನ್ನು ॥
ಅಂದವಾಗಿದೆ ಇವರು ಮಾಡುವ ಸಾಧನವು ।
ಇಂದಿರೇಶನೆ ನಿಂತು ಮಾಡಿಪನಲ್ಲದೆ ॥ ೨ ॥
ಸಕಳೇಂದ್ರಿಯಗಳಿಂದ ರುಕುಮಣಿ ಅರಸನ್ನ ।
ಸಕಲ ಕಾಲಗಳಲ್ಲಿ ಸೇವಿಸುತಿಹ್ಯ ॥
ಭಕುತ ವತ್ಸಲ ತಂದೆ ಗೋಪಾಲ ವಿಠಲನಲ್ಲಿ ।
ಭಕುತಿ ವೆಗ್ಗಳರಾಗಿ ಭುವನದಲಿ ಮೆರವರ್ಗಿಗೆ ॥ ೩ ॥

ಪದ ೧೪ (೭೯) ರಾಗ ಕಾಂಬೋದಿ ಝಂಪಿತಾಳ

ತೆರಳಿದರಿಂದು ಶ್ರೀ ಹರಿಯ ಪುರಕೆ ವ್ಯಾಸ ತತ್ವಜ್ಞ ।
ವರಿಯ ಕಳೆವರ ಬಿಟ್ಟು ॥ ಪಲ್ಲ ॥
ರೌದ್ರಿ ವತ್ಸರ ನಭೋಮಾಸ ಕೃಷ್ಣಾಷ್ಟಮಿ ।
ಭದ್ರವಾರದಿ ಪ್ರಥಮ ಯಾಮದಲ್ಲಿ ॥
ಸದ್ರಾಗದಲಿ ಹರಿಯ ಸ್ಮರಿಸುತಲಿ ಈ ತುಂಗ ।
ಭದ್ರ ತೀರದಲಿ ಸದ್ವೈಷ್ಣವರು ನೋಡ ॥ ೧ ॥
ಭುವನೇಂದ್ರರಾಯರೆಂಬಂಬುಧಿ ಇಂದುದಿಸಿ । (ಲಿವುದಿಸಿ) ।
ಕವಿಜನರ ಮನ ಕುಮುದ ಕೋರಕಗಳ । (ಚಕೋರಗಳ) ॥
ತವಕದಿಂದಲಿ ವಿಕಾಸವನು ಮಾಡಿದ ।
ಸ್ತವನ ಭೂಸುರರಿಂದ ಮಾಡಿಸಿಕೊಳುತ ಸೋಮಪುರದಿ ॥ ೨ ॥
ನರಹರೀ ಹಯಗ್ರೀವ ವಾಸುದೇವನ ಪಾದ ।
ಸ್ಮರಿಸುತ ಮಕರಂದ ಸೇವಿಸುತಲಿ ॥
ಶರಣುವತ್ಸಲ ತಂದೆ ಗೋಪಾಲ ವಿಠಲನು ।
ಇರಿಸಿದಾ ನಿವರೊಂದು ಪರಿಯಿಂದಲೀಗ ॥ ೩ ॥

ಶ್ರೀ ಜಗನ್ನಾಥ ವಿಠಲರ ಕೃತ

ಪದ ೧೫ (೮೦) ರಾಗ ಕಾಂಬೋದಿ ಝಂಪಿತಾಳ

ರಾಮಾರ್ಯ ನಿಮ್ಮಂಘ್ರಿ ಕಮಲಗಳಿಗೆ ।
ನಾಮುಗುವೆ ಕರವ ಕರುಣದಿ ವೆಂಕಟ ॥ಪಲ್ಲ॥
ಬಾಹ್ಯ ಕರ್ಮವ ತೊರದು ಸರ್ವಗತನಾದ ನರ ।
ಸಿಂಹನತಿ ಪ್ರೀತಿಗೋಸುಗಸ್ನೇಹದಿ ॥
ಮಹ್ಯಮರರಿಗೆ ವಿದ್ಯ ವಸ್ತ್ರಾನ್ನ ಪ್ರತಿದಿವಸ ।
ಸಹಸವಿಲ್ಲದೆ ಕೊಟ್ಟು ಮೋದಿಸುವೆ ವೆಂಕಟ ॥ ೧ ॥
ಶ್ರೀ ವಾಸುದೇವ ವಿಠ್ಠಲ ನಂಘ್ರಿಗಳ ರಾ ।
ಜೀವ ಮಧುಕರ ಮಧ್ವಶಾಸ್ತ್ರಜ್ಞನೆ ॥
ಅವದೇಶದೊಳಿದ್ದ ಗೆನ್ನರಿಯದೇ ನಿಮ್ಮ ।
ಸೇವ ಸೇವಕರೊಳಗೆ ಎಣಿಸುವದು ವೆಂಕಟ ॥ ೨ ॥

ಬಾಲನ ಬಿನ್ನಪವ ಲಾಲಿಸಿ ಕರುಣದಿ ಗೋ ।
ಪಾಲದಾಸರನುಗನೆಂದು ॥
ಪಾಲಿಪದು ಪರಮ ಕರುಣಾಳು ಜಗನ್ನಾಥವಿಠಲ ।
ಗಾಳಿನಿಪ ಪವಮಾನ ಸಖನೆ ವೆಂಕಟ ॥ ೩ ॥

ಪದ ೧೬ (೮೧) ರಾಗ ಕಾಬೋದಿ ಝಂಪಿತಾಳ

ಆವಜನುಮದ ಸುಕೃತ ಫಲಿಸಿತೆನಗೆ ।
ಕೋವಿದಾಗ್ರಣಿ ವ್ಯಾಸ ತತ್ವಜ್ಞರ ಕಂಡೆ ॥ ಪಲ್ಲ ॥
ಜೀವಸಾಮಾನ್ಯರೆಂದರಿಯದಿರಿ ಶಾಸ್ತ್ರಗಳ ।
ನಾವಲೋಕಿಸದಿ ಪೇಳ್ವರು ನಿತ್ಯದಿ ॥
ದೇವಾಂಶರಿವರು ಸಂಶಯವು ಬಡಸಲ್ಲ ಮಾ ।
ಯಾ ವಲ್ಲಭನು ಇವರ ಹೃದಯದೊಳಗಿರುತಿಪ್ಪ ॥ ೧ ॥
ಕವಿಭಿರೀಡಿತ ಮಹಾ ಮುನಿ ವ್ಯಾಸ ಕೃತಸು ಭಾ ।
ಗವತಾದಿ ಗ್ರಂಥ ವ್ಯಾಖ್ಯಾನ ನೋಡಿ ॥
ಭುವನೇಂದ್ರರಾಯರಾ ಕರುಣದಲಿ ತುರಿಯಾಶ್ರ ।
ಮವನಿತ್ತು ವ್ಯಾಸ ತತ್ವಜ್ಞರಹುದೆಂದ ॥ ೨ ॥
ಈ ಜಗತ್ರಯದೊಳಗೆ ಪೂಜ್ಯ ಪೂಜಕರ ನಿ ।
ರ್ವ್ಯಾಜದಲಿ ತಿಳುಪಿದನು ಭಕ್ತಜನಕೆ ॥
ಶ್ರೀ ಜಗನ್ನಾಥ ವಿಠಲನೊಬ್ಬ ಪೂಜ್ಯ ಪಂ ।
ಕೇಜಭವಭವರು ಪೂಜಕರೆಂಬರ್ವನೊಡ್ಡೆ ॥ ೩ ॥

ಪದ ೧೭ (೮೨) ರಾಗ ಕಾಂಬೋದಿ ಝಂಪಿತಾಳ

ಕೃತ ಕೃತ್ಯನಾದೆ ನಿಂದಿನದಿನದೊಳು ।
ಕ್ಷಿತಿ ಸುರ ವೆಂಕಟರಾಮಾರ್ಯನ ಕಂಡು ॥ ಪಲ್ಲ ॥
ಭೂಮಂಡಲದೊಳುಳ್ಳ ಸಕಲ ತೀರ್ಥಸ್ನಾನ ।
ಹೇಮಾದ್ರಿ ಮೊದಲಾದ ಕ್ಷೇತ್ರಯಾತ್ರೆ ॥
ನೇಮಜಪತಪ ವ್ರತಾದಿಗಳ ಮಾಡಿದ ಪುಣ್ಯ ।
ಈ ಮಹಾತ್ಮರ ಕಂಡ ಮಾತ್ರ ಸಮನಿಸಿತು ॥ ೧ ॥

ಷಣ್ಣವತ್ಯಬ್ದ ಪರಿಯಂತ ಹರಿಮಹಿಮೆಗಳ ।
ಸನ್ನುತಿಯಲಿ ಶ್ರುತಿಸ್ಮೃತಿಗಳಿಂದ ॥
ಧನ್ಯರೆಂದೆನಿಸಿ ಮಹಿಯೊಳಗೆ ಪೂರಿತರಾದ ।
ಪುಣ್ಯಚರಿತರದಿವ್ಯ ಪಾದವನೆ ನಾ ಕಂಡು ॥ ೨ ॥
ಹೀನ ಜನರೇ ಬಹಳ ಕ್ಷೋಣಿಯ ಮೇಲೆ ಸು ।
ಜ್ಞಾನಿಗಳು ದುರ್ಲಭರು ಕಲಿಯುಗದಲಿ ॥
ಆನತೇಷ್ಟಪ್ರದ ಜಗನ್ನಾಥವಿಠಲ ।
ತಾನೆ ಕರತಂದು ತೋರಿ ಪೂನೀತನವಮಾಡ್ದ ॥ ೩ ॥

ಪದ ೧೮ (೮೩) ರಾಗ ಭೈರವಿ ಝಂಪಿತಾಳ

ತೆರಳಿದರು ವ್ಯಾಸ ತತ್ವಜ್ಞ ಮುನಿಪಾ ।
ಪುರುಷೋತ್ತಮನ ಗುಣಗಳರುಪಿ ಸುಜನರಿಗೆ ॥ ಪಲ್ಲ ॥
ವರ ರೌದ್ರಿನಾಮ ಸಂವತ್ಸರ ಶ್ರಾವಣೋ ।
ತ್ತರ ಪಕ್ಷ ಅಷ್ಟಮಿ ಭೌಮವಾರ ।
ಭರಣಿ ನಕ್ಷತ್ರ ಪ್ರಾತಃಕಾಲದಲಿ ಸೋಮ ।
ಪುರದಿ ಗೋಪಾಲ ಕೃಷ್ಣನ ಪಾದ ಸನ್ನಿಧಿಗೆ ॥ ೧ ॥
ವೇದಾಬ್ಜ ಭವಸೂತ್ರ ಭಾಷ್ಯಭಾಗವತ ।
ಮೊದಲಾದ ಶಾಸ್ತ್ರಗಳ ಕೀರ್ತನೆ ಮಾಳ್ಪರ ॥
ಪಾದೋದಕವ ಶಿರದಿ ಧರಿಸುವರ ದುರಿತವ ನಿ ।
ರೋಧಗೈಸ್ಯಖಿಳಾರ್ಥ ಪೂರೈಸಿ ಪರಗತಿಗೆ ॥ ೨ ॥
ಸೂರಿ ವೆಂಕಟ ನೃಸಿಂಹಾರ್ಯಸುತ ಸುಜನೋಪ ।
ಕಾರಿ ವೆಂಕಟರಾಮ ನಾಮಧೇಯ ॥
ಚಾರುತರ ಆಶ್ರಮೋಚಿತ ಕರ್ಮ ವಾಚರಿಸಿ ।
ವೈರಾಗ್ಯನಿಧಿ ವಿಷ್ಣು ದಾಸಾರ್ಯತ್ವರಿತಾ ॥ ೩ ॥
ಗುರುವರಿಯ ಭುವನೇಂದ್ರ ಕರಕಮಲ ಸಂಜಾತ ।
ವರವ್ಯಾಸ ತತ್ವಜ್ಞ ಹರುಷದಿಂದ ॥
ಮರದು ವೈಷಿಕ್ಯ ವೈಭವ ವಾಸುದೇವ ।
ನರಹರಿ ಹಯಗ್ರೀವರಂಘ್ರಿಗಳ ಸ್ಮರಿಸುತಲಿ ॥ ೪ ॥

ಸೋಜಿಗ ವಿದಲ್ಲ ಸಜ್ಜನರನುದ್ಧರಿಸುವರು ।
ಶ್ರೀ ಜಗನ್ನಾಥವಿಠಲನ ಪಾದಾ ॥
ಜರಾಜೀವಯುಗ್ಮ ನಿರ್ವ್ಯಾಜದಿಂದಲೆ ಭಜಿಪದೇ ।
ಪ್ರಯೋಜನವು ಇತರ ವ್ಯಾಪಾರಗಳ ತೊರೆದು ॥ ೪ ॥

ಜನಾರ್ಧನ ವಿಠಲ ಕೃತ

ಪದ ೧೯ (೫೪) ಶಂಕರಾಭರಣ ತಾಳ

ಲೇಸು ಪಾಲಿಸೊ ಎನಗ ಭಾಷೆ ಪಾಲಕಾ ।
ಲೇಸು ಪಾಲಿಸೊ ಎನಗೆ ವಾಸುದೇವ ವಿಠ್ಠಲ ।
ದಾಸರಾಯನೆ ಇತರ ಆಶೆ ಪರಿಹರಿಸಿ ॥ ಪಲ್ಲ ॥
ಕಾಸು ಬೇಡೆನೊ ಹರಿದಾಸನೆನಿಪವಂದೆ ।
ಮೊಸಲ ಮನವನ್ನೆ ಶಾಶ್ವತದಲಿ ನಿಲಿಸಿ ॥ ೧ ॥
ಬಿಂದು ಮಾಧವನ ಹೃದಯ ।
ಮಂದಿರದಲಿ ಕಾಂಬ ॥
ತಂದೆ ಕರುಣಸಿಂಧು । ಇಂದು ದಯದಿಪೊಲಿಸಿದ ॥ ೨ ॥
ಅನ್ನದಾನಿಯೆ ನಿನ್ನಯ ಪನ್ನಜ ಚರಣಕ್ಕ ।
ಇನ್ನೆರಗುವೆ ಎನ್ನ ಪನ್ನಗ ಶೈಯನನ್ನ ತೋರಿ ॥ ೩ ॥
ಆಸರ ಕಾಣೆನೊ ದಾಸಿರಾಯನ ಮಗಳ ।
ಕೂಸಿನ ಮಹಿಮೆಯ ವಾಸಿಯಿಂದಲಿ ತೋರಿ ॥ ೪ ॥
ಭಾಸುರ ಜನಾರ್ದನ ವಿಠಲರಾಯನ ಪಾದ ।
ದಾಸರದಲಿ ಬಾಳ್ವದಾಸ ದಾಸಾಗ್ರಣೀ ॥ ೫ ॥

ಅಭಿನವ ಜನಾರ್ಧನ ವಿಠಲ

ಪದ ೨೦ (೬೫) ರಾಗ ಝಂಪಿತಾಳ

ಕಂಡೆ ಕಂಗಳ ದಣಿಯಲಿಂದು ।
ಪಂಡಿತಾಗ್ರಣಿ ವ್ಯಾಸತತ್ವಜ್ಞ ಸಂಯಮಿಯರ ॥ ಪಲ್ಲ ॥
ಈ ಧರಿಯ ಸಜ್ಜನರು ಮಧ್ವ ಸಚ್ಛಾಸ್ತ್ರಾಖ್ಯ ।
ಸ್ವಾದನ್ನ ಭುಂಜಿಸುವ ಸಮಯದಲ್ಲಿ ॥

ಅದ್ವೈತಕೃತಿ ಎಂಬ ಕ್ಷುದ್ರಮಕ್ಷಿಕೆಗಳ ಉ ।
ಪದ್ರವನೆ ಮಾಣಿಸಲು ವ್ಯಜನ ನಿರ್ಮಿಸಿದವರ ॥ ೧ ॥
ತಾಪತ್ರಯಾಖ್ಯರವಿ ತಾಪದಿಂದಲೆ ತವ ।
ಸಮೀಪ ಸಜ್ಜನರುಗಳು ಬರಲು ನೋಡಿ ॥
ಶ್ರೀ ಪತಿಯ ಮಹಿಮೆಯನು ಪೇಳುತಲಿ ವ್ಯಜನದಿ ।
ಕೃಪಾಪಯೋದಧಿಯು ಭವತಾಪಪರಿಹರಿಸುವರ ॥ ೨ ॥
ಧಾತ್ರಿಯೊಳಗೀ ವ್ಯಾಸ ತತ್ವಜ್ಞರಂತೆಂಬೊ ।
ಕೀರ್ತಿ ಇವರಲ್ಲಿ ಸಾರ್ಥಕವಾಯಿತು ॥
ಕರ್ತೃ ಅಭಿನವ ಜನಾರ್ದನ ವಿಠಲ ಹಯವದನ ।
ಮೂರ್ತಿ ಮತ್ತಾಗಿ ತಾನಿಲಿಸಿದ ಮುನಿವರರ ॥ ೩ ॥

ತಂದೆ ವಾಸುದೇವವಿಠಲ ಕೃತ

ಪದ ೨೧ (೫೬) ರಾಗ ತಾಳ

ರಾಜಮಣಿ ಗುರುರಾಜಮಣಿ ॥ ಪಲ್ಲ ॥
ಸತತ ಸೇವಿಸುವವರ ಖತಿಯ ಕಳೆದು ।
ಹಿತತತಿ ಪಾಲಿಪ ಉನ್ನತ ಸುರಧೇನು ॥ ೧ ॥
ದ್ವಿಜವರ (ಜನ) ವಂದಿತ ಸುಜನ ಪೋಷಕನೆ ।
ಗಜ ವರದನ ಪದ ಭಜನೆ ಮಾಡುವ ॥ ೨ ॥
ಸುಂದರ ಇಂದಿರಾ ವಂದಿತ ಚರಣ ।
ತಂದೆ ವಾಸುದೇವನ ದಾಸಾಗ್ರಣಿ ॥ ೩ ॥

ಪದ ೨೨ (೫೭) ರಾಗ

ಮೃಗರಾಜ ಕಟಿ ಮೃಗನ ತೋರಿರೊ ॥ ಪಲ್ಲ ॥
ವಾಜಿಮುಖನಂಘ್ರಿ ಸರೋಜಗಳನುದಿನ ।
ಭಜಿಸಿ ಸುಖಿಸುವ ದ್ವಿಜವರನ್ಯಾರಿ ॥ ೧ ॥
ಯತಿಯಾಗಿ ಕ್ಷಿತಿಯೊಳು ಬಲುಪರಿ ।
ಮತಿಬೀರಿದ ಅತಿಹಿತಕರನ್ಯಾರಿ ॥ ೨ ॥
ಗ್ರಹಿಯಾಗಿ ಶಮದಹಿಅಂದನುದಿನ ।
ವಿಹಿತ ಚರಿಸಿದಂಥ ಮಹಿಮನುದಾರಿ ॥ ೩ ॥

ನರ ಮೃಗರಾಜನ ಅರಘಳಿಗಗಲದೆ ।
ಪರಿಪರಿ ಪೂಜಿಪ ಗುರುವರನ್ಯಾರೆ ॥ ೪ ॥
ಏಸುಪರಿ ಪರಿನುತಿಸಲಿ ।
ಲೇಸು ಬೋಧಿಸುವ । ತಂದೆ ॥
ವಾಸುದೇವನ ದಾಸನುದಾರಿ ॥ ೫ ॥

ಶ್ರೀಧರ ವಿಠಲ ಕೃತ

ಪದ ೨೩ (೮೮) ರಾಗ ರೇಗುಪ್ತಿ ಆದಿತಾಳ

ವೃಂದಾವನದಿ ವಿರಾಜಿಪ ಯತಿವರನ್ಯಾರೆ ಪೇಳಮ್ಮಯ್ಯ ।
ಪೊಂದಿದ ಸುಜನರ ವೃಂದಪೊರೆವ ಭುವ ।
ನೇಂದ್ರರ ಕರಕಂಜಜ ಯತಿವರರೆ ॥ಅನುಪಲ್ಲ॥
ಉದಿತ ಭಾಸ್ಕರನ ತೆರದಿ ಸುಶೋಭಿಪನ್ಯಾರೆ । ಪೇಳ ॥
ಪದುಮಾಕ್ಷ ತುಳಸಿದಂಡ ದ್ವಿಮುಖಿ ಇಹನ್ಯಾರೆ । ॥ ಪೇ ॥
ಒದಗಿಬರುವ ದುರ್ಮದ ತಿಮಿರಕಳೆವ ।
ಸದುದಿತ ಜಲಜಾಪ್ತನು ಕಾಣೆಮ್ಮಾ ॥ ೧ ॥
ಮದವಿರಹಿತ ಶಮದಮೊಗಳಿಂದೊಪ್ಪುವನ್ಯಾರೆ ಪೇಳಮ್ಮಯ್ಯ ।
ಮೃದುಮಧುರ ವಚನ ಸುಧಿಯುಗರೆವ ಮುನಿದಾರೆ
ಪೇಳಮ್ಮಯ್ಯ ॥
ವಿಧುಗಳಮನ ಕುಮುದಗಳರಳಿಸುತಿಹ ।
ವಿಧುವರ ವ್ಯಾಸ ತತ್ವಜ್ಞ ತೀರಿಥರೆ ॥ ೨ ॥
ಮೋದಬೀರುವ ಕಳೆವರದೊಪ್ಪುವನ್ಯಾರೆ ಪೇಳಮ್ಮಯ್ಯ ।
ಬೋಧಪೂರ್ಣರ ಸುಶಾಸ್ತ್ರ ಪೇಳ್ವಮುನಿಯಾರೆ ಪೇಳ ॥
ಶ್ರೀಧರ ವಿಠಲನ ದಾಸೋತ್ತಮರೆ ಕು ।
ವಾದಿ ಪರ್ವತ ವಿಭೇದನಪವಿಧರ ॥ ೩ ॥

ಪದ ೨೪ (೮೯) ರಾಗ ರೇಗುಪ್ತಿ ಆದಿತಾಳ

ವೇಣಾನೂದುತ ನಿಂತಿಹನ್ಯಾರೆ ಪೇಳಮ್ಮಯ್ಯ ॥ ಪಲ್ಲ ॥

ವಾಣಿಧವಾಧರ ಪ್ರಾಣದೊಡೆಯ ಸುರಶ್ರೇಣಿ ವಂದ್ಯ ಜಗತ್ಪ್ರಾಣ
ಕಾಣೆವ್ಮ || ಅನುಪಲ್ಲ ||
ವ್ರಜಮಧುರಾಪುರ ದ್ವಾರಕಿ ತ್ಯಜಿಸಿಹನ್ಯಾರೆ ಪೇಳಮ್ಮಯ್ಯ ||
ರಜತಪೀಠ ಬಿಟ್ಟಲ್ಲಿಗೆ ಬಂದಿಹನಾರೆ ಪೇಳಮ್ಮಯ್ಯಾ
ದ್ವಿಜವರ ರಾಮಾರ್ಯರ ಭಜನೆಗೊಲಿದು ತನ್ನ |
ನಿಜಸ್ಥಳ ತೊರೆದ ಸಾಮಜ ಪೋಷಕನೇನೆ ಪೇಳಮ್ಮಯ್ಯ ||೧||
ಕಾಮಿನಿಯರು ಎಡಬಲದಲಿ ಒಪ್ಪುತಲಿಹನಾರೆ ಪೇಳಮ್ಮಯ್ಯ|
ಹೇಮಗರ್ಭಪಿತ ಶ್ರೀ ಮಹಿಳೇರ್ಬಲ ರಾಮನನುಜನೇ
ಪೇಳಮ್ಮಯ್ಯ
ಸೋಮಾರ್ಕಮಿತ ದೀಧಿತಿ ವಿಲಸಿತ ನೊಪ್ಪುವನಾರೆ
ಪೇಳಮ್ಮಯ್ಯ || ೨ ||
ಯಾದವ ಕುಲಮಣಿ ಆದಿ ಪುರುಷ ನಿವನಹುದೇನೇ
ಪೇಳಮ್ಮಯ್ಯ |
ಪಾದಬಳಿಯಲಿ ಸುಬೋಧಕ ಕಪಿಯು ತಾನಿಹ್ಯನ್ಯಾರೆ
ಪೇಳಮ್ಮಯ್ಯ ||
ಶ್ರೀಧರ ವಿಠಲ ವಿನೋದಿ ರಾಮನೆಂದಾದರದಲಿ ಮುಂದಾದ
ಹನುಮನೇನೆ ಪೇಳಮ್ಮಯ್ಯಾ || ೩ ||

### ಶ್ರೀಶ ಗೋಪಾಲ ವಿಠ್ಠಲ ಕೃತ

ಪದ ೨೫(೯೦) ರಾಗ ಝಂಪಿತಾಳ

ಏಸು ಜನ್ಮದ ಸುಕೃತ ಫಲಿಸಿತೆನಗೆ |
ವ್ಯಾಸ ತತ್ವಜ್ಞರಲಿ ವಾಸವಾದುದು ನೋಡೆ || ಪಲ್ಲ ||
ಕೇವಲಾರ್ತವಾದ ವತ್ಸ: ತನ್ನಪಡೆದ |
ಗೋವು ಕಾಣದಲೆ ಅರ್ಭಟಿಸುತಿರಲು ||
ಆ ವಾರ್ತೆ ಸುರಧೇನು ತಾನೇ ಒದಗಿ ಬಂದು|
ಸಾವಧಾನದಿ ಮೊಲೆಯುಣಿಸಿ ಸುಖವಿತ್ತಂತೆ. || ೧ ||
ಬ್ಯಾಸಿಗೆ ಬಿಸಲಿಂದ ಸಂತಪ್ತನಾಗಿ ನಿ |

ಶ್ವಾಸ ವೈದುವ ಸಮಯದಲ್ಲಿ ಮತ್ತೆ ||
ಭೂಸುರಾ ರೂಪದಲಿ ಕಲ್ಪವೃಕ್ಷವೆ ಬಂದು |
ಲೇಸಾಗಿ ಉದಕ ಪೂರೈಸಿ ನೆಳಲಿತ್ತಂತೆ || ೨ ||
ಪರಮದಾರಿದ್ರ ನೋರ್ವನು ದೇಶ ದೇಶವ |
ತಿರಗುತಿರಲು ಚಿಂತಾಮಣಿಯು ||
ಭರದಿಂದ ಕೈಯ್ಯಲ್ಲಿ ಒದಗಿ ತಾ ಬಂದಂತೆ |
ತ್ವರದಿಂದ ಶ್ರೀಶ ಗೋಪಾಲ ವಿಠಲನೊಲಿವ || ೩ ||

ಪದ ೨೩ (೯೧) ರಾಗ ಭೈರವಿ ತ್ರಿವಿಡಿತಾಳ

ಯತಿವರ ವ್ಯಾಸ ತತ್ವಜ್ಞ ತೀರ್ಥರ ಪಾದ |
ಸತತಸ್ಮರಿಸ ಪರಮಾನಂದ |
ಕ್ಷಿತಿ ಸುರವರರಲಿ ಕೃಪೆಮಾಡುವೆನೆಂ |
ಬತಿಶಯದಿಂದಿಲ್ಲಿ ತಾನಿಂದ || ಪಲ್ಲ ||
ಶಮ ದಮ ಯಮ ನಿಯಮಾದಿ ಮಹಾಗುಣ |
ಸಮುದಾಯಾಶ್ರಯ ಮೂರ್ತಿಯನು |
ನಮನಮಾಡುವ ಜನರಿಗೆ ಸುಮತಿಯನೀವ |
ಅಮರರು ಶ್ಲಾಘಿಪ ಕೀರ್ತಿಯನು |
ಕಮಲದಳಾಕ್ಷನ ಕರುಣಕಟಾಕ್ಷದಿಂ |
ದಮಿತ ಮುದವ ತಾ ಕೊಡುತಿಹನು |
ವಿಮಲ ಭಕುತಿಯಲಿ ಸೇವಿಸೆ ಮುನಿವರ |
ಕ್ಷಮಿಸುವ ಮಹದಪರಾಧವನು || ೧ ||
ಮೋದದಿ ವೇದಾಂತಾದಿ ಶಾಸ್ತ್ರಗಳ |
ಸಾಧಿಸಿ ಗೆಲುವ ದುರ್ವಾದಿಗಳ |
ಮೇದಿನಿಯೊಳ್ ಪೂರ್ಣಬೋಧ ಶಾಸ್ತ್ರೋಕ್ತ ಕರ್ಮ |
ಸಾದರದಲಿಮಾಳ್ಪ ತಪಸಿಗಳ |
ಶೋಧಿಸಿ ಹೃದಯ ಸಮಾಧಿಯೊಳ್ |
ಶ್ರೀಧರ ಮೋದಿಪ ತೆರದಲಿ ಸ್ತೋತ್ರಗಳ |

ಪಾದ ಭಜಿಸುವರು ಪರಮಹರುಷದಿಂ ।
ದೋದಲು ತಿಳಿಯೆ ಗೂಢಾರ್ಥಗಳ ॥ ೨ ॥
ನವವಿಧ ಭಕುತಿಯಿಂದ್ಯುತನಾಸನ್ಮುತ ।
ಕವನ ಸುಳಾದಿ ಪದಗೆತಿಪ್ರಾಸೆಸಗಿನಿತ್ಯ-ವಾ ।
ನವ ಹರಿಪದ ಭೃಂಗಾಯುತನಾ ।
ಭುವನೇಂದ್ರರ ಕರ ಸರಸಿಜ ಭವನನ ।
ಸ್ತವನ ಮಾಡಿರುವೊ ಮಹಾಮಹಿಮರನ ।
ಕವಿಜನರಿಗೆ ಸುರಕಲ್ಪ ತರುವವೋಲ್ ।
ತವಕದಿ ಕೊಡುವ ಸುಫಲಗಳನಾ ।
ಪವನಾಂತರ್ಗತ ಶ್ರೀಶ ಗೋಪಾಲ ವಿಠಲನ ।
ಸೇವಕ ಸುಜನರ ವೃಂದ ವಂದಿತನಾ ॥ ೩ ॥

**ಈ ಪದ ಶ್ರೀನಿವಾಸ ಮಾಧವ ತೀರ್ಥರ ಸ್ತೋತ್ರವಿದೆ ಐಜಿ ಸ್ವಾಮಿಗಳ ಸ್ತೋತ್ರದಲ್ಲಿ ಬರೆದದೆ ಇವರಾರೊ?**

**ಪದ ೨೭ (೯೨) ರಾಗ ಕಾಂಬೋದಿ ಝಂಪಿತಾಳ**

ಪೊಗಳೊಶೆವಲ್ಲ ಎನಗಿವರ ಮಹಿಮೆ ।
ಖಗವರಾಡ್ ಧ್ವಜನಂಘ್ರಿ ಬಗೆಬಗೆಯುಲರ್ಚಿಪರ ॥ ಪಲ್ಲ ॥
ಎಷ್ಟು ಪೊಗಳಲಿ ನಾನು ಇವರ ಮಹಿಮೆ ।
ಶಿಷ್ಟಜನರೊಳು ಮಹಶ್ರೇಷ್ಠ ಸಂಯಮಿವರರ ॥ ಅನುಪಲ್ಲ ॥
ವಾಸುದೇವ ಮಾಧವ ತೀರ್ಥಕರಜಾತ । ಶ್ರೀನಿ ।
ವಾಸ ಮಾಧವ ತೀರ್ಥನಾಮದಿಂದ ॥
ದೇಶದೋಳ್ ಚರಿಸಿ ತನ್ನ ನಂಬಿದ ಸಜ್ಜನರ ।
ಪೋಷಿಸುತ ಪರಮ ಸಂತೋಷ ಬಡಿಸುವ ಮುನಿಯ ॥ ೧ ॥
ಎರಡೊಂದು ವಿಧದನ್ನ ಮೂರು ಬಗೆ ಉಣಿಪ ।
ಎರಡೊಂದು ಅನ್ನವು ಪರಿ ರಾಘವನಿಗೆ ।
ಸುರರಗೊಂದನ್ನ ಚಿರ ಪಿತೃಗಳಿಗೊಂದನ್ನ ।
ನರರಿಗೊಂದನ್ನ ಪಶುಗಳಿಗೆ ಉಣಿಸುವರ ॥ ೨ ॥

ಏಳೆರಡು ದ್ವಾರಯುತ ಪೊಳಲದೊಳು ನಾಡಿವನ ।
ನಳಿನಾತ್ಮಕಾ ಚಿತ್ರ ವೀಥಿಯಲ್ಲಿ ।
ಪೊಳವ ತರುಛಾಯದಲಿ ಚಲುವರಥ ವುಂಟಪದಿ ।
ವ್ಯಾಳಪೀಠದಿ ಲಕ್ಷ್ಮಿನಿಲಯನರ್ಚಿಸುವವರ ॥ ೩ ॥
ಸುರುಪುರದ ವಿಭವ ಧಿಕ್ಕರಿಸುವ ಗದ್ವಾಲಿ ।
ಪುರದ ಧೊರೆ ರಾಮಭೂಪಾಲನಿಂದ ॥
ಭರದಿ ಪ್ರಾರ್ಥಿತರಾಗಿ ವರಕೃಷ್ಣಾ ತಟದಲ್ಲಿ ।
ಸಿರಿವರ ರಾಘವನ ನಿರುತ ಪೂಜಿಸುವರನ ॥ ೪ ॥
ಶ್ರೀಶ ಗೋಪಾಲ ವಿಠ್ಠಲನೆ ಸರ್ವೋತ್ತಮನು ।
ಆಶುಗನೆ ಸರ್ವಜನರಿಗುತ್ತಮಾ ॥
ಈಶನೆ ಸಕಲ ಸದ್ವೈಷ್ಣವೋತ್ತಮನೆಂದು ॥
ದಾಸಜನಕರುಹಿ ಸಂತೋಷ ಬಡಿಸುತಲಿಹರ ॥ ೫ ॥

## ಕರ್ನೂಲ ಪುಟಪರ್ತಿ ಶ್ಯಾಮಾಚಾರ್ಯರಿಂದ ರಚಿತವಾದದ್ದು.

ಪದ ೨೮ (೯೩) ರಾಗ ದ್ವಿಜಾವಂತಿ ಆದಿತಾಳ

ಶ್ರೀ ವ್ಯಾಸ ತತ್ವಜ್ಞರೆಂಬುವ ಮಹಾ ।
ದೇಶಿಕಾಗ್ರೇಸರರನ್ನು ನೋಡ್ವೈ ॥
ದಾಸಜನರ ಮನದಾಸಿಗಳನು ಪೂ ।
ರೈಸಿ ಪೊರೆವ ಸನ್ಯಾಸಿವರ್ಯ ಶ್ರೀ ॥ ಪಲ್ಲ ॥
ಮೂರೊಂದಾಶ್ರಮದ ಧರ್ಮವನು ನಡಿಸಿದ ।
ಧೀರನೂ ಅರಿದರಧಾರಿ ಶೌರಿ ವಿಗ್ರಹ ನಿಲ್ಲಿಸಿದುದಾರನೂ ॥
ಮೂರನೇ ಅವತಾರದಿ ಭುವನೇಂದ್ರ ಕುಮಾರನು ತನ ಪಾ ।
ದಾರಾಧಕ ಸಜ್ಜನರಿಗೆ ಮುಕ್ತಿದ್ವಾರನೂ ॥
ಯಾರುಭುಗಳ ಅವತಾರನು ಧರೆಯೊಳು ।
ತೇರನೇರಿ ಮಿಗೆ ಮೀರಿ ಮೆರೆವ ಪ್ರತಿ ।
ಯಾರಾಧನಿಗೆ ಮುರಾರಿಯ ಕಥೆಯು ಸ ।

ವೀರ ಶಾಸ್ತ್ರದ ವಿಚಾರಗಳಿಹ ಶ್ರೀ ॥ ೧ ॥
ಷೋಡಶ ಬಾಹು ರಮಾ ನರಸಿಂಹೋಪಾಸಕಾ ಜನ । ಕೊಂ
ಡಾಡುವ ಮುಖ್ಯ ಪವನ ಸಿದ್ಧಾಂತ ತಪ್ಪೋಹಿತಾ ॥
ಓಡಿಸಿ ಮಾಯ್ಗಳ ದುಃಸ್ಸಮಯಕೆ ಸಂಶೋಷಕಾ ಜನರ ಕೈ ।
ಜೋಡಿಸಿ ಪೊಂದಲನುಗ್ರಹದಿಂದುಪದೇಶಿಕಾ ॥
ಪಾಡಿ ಪೊಗಳುವರು ಬೇಡಿದ ವರಗಳ ನೀಡುವ ದಯವಂ ।
ಮಾಡಿ ದ್ವಿಜರ ಕಾಪಾಡುವ ಗುರುವರಗೀಡಿಲ್ಲವೊ ಈ ।
ನಾಡೊಳಗೆ ಸುಕೃತಿ ಚೂಡಾಮಣಿ ಶ್ರೀ ॥ ೨ ॥

ಸೋಮಪುರಾಖ್ಯ ಗ್ರಾಮದಲಿಹ ಗುರುರಾಜನೂ ।
ಸೋಮ ಸ್ವಮತರ ಕುಮುದಗಳ ಸಮುದಾಯಕ ದ್ವಿಜ
ರಾಜನೂ ॥
ಕಾಮಾದ್ಯರಿಗಳ ಓಡಿಸಿ ಜ್ಞಾನಕ ಬೀಜನೂ ।
ಆಶ್ರಿತರು ಭೊಜನು ॥
ಶಾಮಲ ಸೀತಾರಾಮಹಯವದನ ಭೂಮ ವಿಠಲರ ನೇಮದಿ
ಪೂಜಿಸಿ ।
ಈ ಮಹಾ ಕ್ರಮದಿ ದಾಮನಿಧಿಯಕೋಲ್ ಭೂಮಿಯೋಳ್
ರಾಜಿಸಿ ಕ್ಷೇಮವೀವ ಶ್ರೀ ॥ ೩ ॥

ಪದ ೨೯ (೯೪) ರಾಗ ಕಾನಡ ಅಟ್ಟತಾಳ

ನೋಡಿ ಧನ್ಯನಾದೆ ಈ ಗುರುಗಳಾ ॥ ಪಲ್ಲ ॥
ನೋಡಿ ಮಹಿಮೆಯು ಕೊಂಡಾಡುವೊ ಜನರಿಗೆ ।
ಬೇಡಿದ ವರಗಳ ನೀಡುವೋ ದಾತಾರ ॥ ಅ. ಪಲ್ಲ ॥
ದೇಶ ದೇಶದೊಳುಪದೇಶವಗೈದಂತೆ ।
ವಾಶೀಗಳನು ಪಡೆದ ದೈಶಿಕವರ್ಯರ ॥ ೧ ॥
ಮೂರೊಂದಾಶ್ರಮ ಧರ್ಮ ಮುರಾರಿಗರ್ಪಿಸಿ ।
ಮೂರು ರೂಪವ ಭಜಿಪಾ ಮೂರಾವತಾರರ ॥ ೨ ॥

ವಾಸುದೇವನ ಬಗಳೋಳ್ ವಾಸವಗೈದ ಸ ।
ನ್ಯಾಸಿಗಳೊಡಿಯಾ ಶ್ರೀ ವ್ಯಾಸತತ್ವಜ್ಞರ ॥ ೩ ॥
ಸೋಮಪುರದಲಿ ಮಹಾ ಮಂತ್ರ ಜಾಪಿಕರ ।
ಕಾಮಿತಪ್ರದ ಶೀತಾರಾಮನ ಭಜಿಪರ ॥ ೪ ॥
ಬಂದು ನಿಂತು ಭಕುತಿಯಲಿ ತುತಿಸುವರ ।
ಕುಂದುಕಳೆದು ಕುಶಲವ ಕೊಡುವ ।
ತಂದೆ ಗೋಪಾಲ ವಿಠಲನ ದಾಸರಿಗಾನಂದವಿತ್ತು ಸಲಿಸಿದ
ಯತಿವರರ ॥ ೫ ॥

ಜನಾರ್ದನ ವಿಠಲ ಕೃತ

## ಶ್ರೀ ಐಜಿ ಸ್ವಾಮಿಗಳು ವ್ಯಾಸತತ್ವಜ್ಞರ ಮಕ್ಕಳು ಗೋಪಾಲ ಕೃಷ್ಣಾಚಾರ್ಯರ ಸ್ತೋತ್ರ

ಪದ ೩೦ (೯೫) ರಾಗ ಕಾಂಬೋದಿ ಝಂಪಿತಾಳ

ಕಾರುಣ್ಯ ನಿಧಿಯೆನ್ನ ಕಾಪಾಡೊ ಕರವಿಡಿದು ।
ಧಾರುಣಿಯೊಳಗಿಟ್ಟು ।
ಮಾರಜನಕನ ಪಾದ ಮಂತ್ರೋಕ್ತಿಯಲಿ ತೋರಿ ।
ಮೂರು ಕಾಲದಲ್ಲಿ ಮುಕುಂದನ ಭಜಿಪ ॥ ಪಲ್ಲ ॥
ವ್ಯಾಶಿಷ್ಟ ಗೋತ್ರದಲಿ ಉದುಭವಿಸಿದೇ ವರ ರಾಮಾ
ರ್ಯರಾ ಉದರವಲ್ಲಿ ॥
ಆಶಿಷ್ಟ ಜನರ ಪರಿಪಾಲಿಸಿದೆ ।
ಆರ್ಷವೆಂಕಟಾರ್ಯ ನಾಮವಲ್ಲಿ ॥
ಕೇಶವನ ಪಾದದಲಿ ಪೊಷಲಾರ್ಚನೆ ಮಾಡಿ ।
ಶಾಶ್ವತದ ಭಕುತಿಯಲ್ಲಿ ॥
ಭಾಸುರರೇ ನಿಮ್ಮ ಕೀರ್ತಿಯನು ಕೊಂಡಾಡಲು ।
ದಾಸನಿಗೆ ವಶವೆ ಸೊಲ್ಲಿನಲ್ಲಿಯೆಲ್ಲಿ ॥ ೧ ॥
ಪರವಾದಿ ಎದೆಶೂಲ ಪರಮಪಾವನ ಸುಗುಣ ।

ಪರಿಪೂರ್ಣ ಜ್ಞಾನದಾನಾ ।
ಚರಿಯ ಅತ್ಯಂತ ತೋರಿದ ಗುಪ್ತಿ ಮಹಿಯೊಳಗ
ಕನ್ಯಾವಸ್ತ್ರಾನ್ನ ದಾನ ॥
ನರರ ಮನೋಭಾವವರಿತವರಂತ ಸಂಚರಿಸಿಸಾರಿದ್ಯೈ ಸಕಲ
ಪುಣ್ಯ ।

ಗುರು ಮಧ್ವ ಮುನಿಕರುಣ ಕವಚವನು ಪಡೆದಂಥ ।
ಶರಣ ಭೂಸೂರ ವರೇಣ್ಯ ಸಂಪೂರ್ಣ ॥ ೨ ॥

ದಾಸ ನಿಮ್ಮವರ ವರ ದಾಸಿ ಪುತ್ರನು ನಾನು ।
ದೇಶದೊಳು ಪುಟ್ಟಿ ಬಂದು ।
ಪಾಶಪಥವ ಪಿಡಿದು ಆಶೆ ಎಂಬ ದರಿದಾ(ದೆ) ಲೇಸು ಕಾಣ
ದಲೆ ಒಂದೂ ॥

ಮೋಸಕೊಳಗಾಗಿ ಮುಕ್ತೇಶನಂಘ್ರಿಯ ಮರೆದು ಮುಂದು
ಗಾಣದಲೆ ನಿಂದು ॥

ದಾಸಜನ ಪರಿಪಾಲ ಶ್ರೀಶ ಜನಾರ್ದನ ವಿಠಲ ।
ಈ ಶರೀರದಿ ತೋರಿ ಕೂಸಿನಂದದಿ ಪೊರೆವ ॥ ೩ ॥

**ಸಂಪೂರ್ಣ**

ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು



ಪ್ರಕಟನೆ ೩೧ ರಿಂದ ಮುಂದೆ

## ೧೦ ರೂ. ಮುಂಗಡ ಕೊಟ್ಟ ಚಂದಾದಾರರ ಉಪಕಾರ ಸ್ಮರಣೆ

೧೫೧ ಶ್ರೀ ವೇ। ದಾಸಾಚಾರ್ಯರು ತಂಗೋಡ, ಕೀರ್ತನಕಾರ ಗದಗ.

೬ ತಿಂಗಳ ಮುಂಚೆ ಪ್ರೆಸ್ಸಿನಲ್ಲಿ ಜಮಾ ಮಾಡಿಸಿರುವರು. ಮತ್ತು

೧೫೨ ಶ್ರೀ ವೇ। ಕೃಷ್ಣಾಚಾರ್ಯರು ಜಹಗೀರದಾರ ವಕೀಲ, ಕೊಪ್ಪಳ.

೧೫೩ ಶ್ರೀ ವೇ। ಗುರುರಾಯರು ವಕೀಲ, ಮುದ್ಲಾಪುರ ಕೊಪ್ಪಳ.

೧೫೪ ಶ್ರೀ ಶ್ರೀನಿವಾಸರಾಯರು ದೇಸಾಯಿ ಕಾಮಲಾಪುರ ತಾ. ಹೊಸಪೇಟೆ ಜಿ. ಬಳ್ಳಾರಿ.

ಇನ್ನೂ ಸುಮಾರು ೩೨–೩೫ ಜನರು ಪುಸ್ತಕ ತೆಗೆದುಕೊಂಡು ಚಂದಾ ರೂ. ಕಳಿಸಿಲ್ಲ. ಬಹು ತೊಂದರೆ ಕೊಟ್ಟ ಈ ಮಹನೀಯರಲ್ಲಿ ತ್ವರಾ ಚಂದಾ ಕಳಿಸಲು ಪುನಃ ಪ್ರಾರ್ಥನೆ.

## ಚಂದಾದಾರರಲ್ಲಿ ವಿನಂತಿ.

ಹೊಸ ವರುಷದ ಚಂದಾ ತ್ವರಾ ಈ ಡಿಸೆಂಬರದಲ್ಲೇ ೫ ರೂ. ಕಳಿಸಿರಿ. ಹೋದ ವರ್ಷ ಶ್ರಾವಣದಿಂದ ನಮ್ಮ ವರ್ಷ ಪ್ರಾರಂಭವಾಗಿ ಈ ವರೆಗೆ ೫ ಪುಸ್ತಕದಲ್ಲಿ ೮೭೮ ಪುಟ ಚಂದಾದಾರರಿಗೆ ಕೊಟ್ಟಿದೆ. ಈಗ ಪ್ರಕಟನೆ ೩೧ ರಲ್ಲಿ ೪೬ ಪುಟ. ಪ್ರಕಟನೆ ೩೨ ರಲ್ಲಿ (೧೩೨) ಪುಟ (೧೦೫೬) ಮುಟ್ಟಿಸಿದೆವು.

ಶ್ರೀ ಗೋಪಾಲದಾಸರು ಬರೆದ ೬–೭ ಫೂಟು ಎತ್ತರವಿದ್ದ ೨ ಪಟಗಳು ಈ ವರೆಗೆ ೮೮೦ ರೂ. ವೆಚ್ಚವಾಗಿ ಫೋಟೋ ತೆಗೆಸುವದು, ಬ್ಲಾಕ ಮಾಡಿಸುವದು, ಬ್ಲಾಕ ಪ್ರಿಂಟ ಮಾಡಲು ಬಹು ದುಸ್ತರದಿಂದ ೨ ಪಟಗಳು ತಯಾರ ಮಾಡಿಸಿ ಚಂದಾದಾರರ ಸನ್ನಿಧಿಯಲ್ಲಿ ಕಳಿಸಿದೆ ಚಂದಾ ಋಣದಿಂದ ಮುಕ್ತನಾಗಿದ್ದೇನೆ. ಈ ವರ್ಷ ಅನೇಕರು ತೊಂದರೆ ಇತ್ತ ಕಾರಣ ಮಂಡಲಕ್ಕೆ ಹಾನಿಯಾಗಿದೆ. ಮುಂದಿನ ವರ್ಷದ ಕಾರ್ಯವು ಪ್ರಾರಂಭವಾಗಿದೆ.

ನೂತನ ಕರ್ನಾಟಕ ರಾಜ್ಯೋದಯ ಸುಸಂಧಿಯಲ್ಲಿ

**ಶ್ರೀ ವರದೇಂದ್ರ**

# ಕರ್ನಾಟಕ ಹರಿದಾಸ ಸಾಹಿತ್ಯ ದ್ವೈಮಾಸಿಕೆಗೆ

## ——→ ಇಂದೇ ಚಂದಾದಾರರಾಗಿರಿ ←——

ಕ್ರೌನ ೧/೮ ೧೩೨ ಪುಟ ವಾರ್ಷಿಕ ಚಂದಾ ಅಂಚೆ ವೆಚ್ಚ ಸಹ ೫ ರೂ.

ಒಳ ೧೨೮ ಪುಟಗಳಲ್ಲಿ ಹರಿದಾಸ ಸಾಹಿತ್ಯದ ವಿವಿಧ ಲೇಖಗಳು ೬೮ ಪುಟದಲ್ಲಿ ದಾಸಸಾಹಿತ್ಯ ತಜ್ಞರ ಲೇಖಗಳು ೨೦ ಪುಟ, ೪೪ ಪುಟದಲ್ಲಿ ಹರಿದಾಸರ ಅಮೃತವಾಣಿ, ಪದ ಸುಳಾದಿ ಮುಂತಾದವುಗಳಿಗೆ ಮೀಸಲಾಗಿಡಲಾಗಿದೆ. ಇದೆ ಶ್ರೀ ಪುರಂದರದಾಸರ ಆರಾಧನಾ ರಥೋತ್ಸವ ಶಕೆ ೧೮೭೮ ಮಾಘ ಶು. ೧ ತಾ. ೧-೨-೫೭ ಕ್ಕೆ ಎಲ್ಲ ಚಂದಾದಾರರಿಗೆ ಮೊದಲನೇ ಸಂಚಿಕೆ ಕಳಿಸಲಾಗುತ್ತದೆ. ವರ್ಷದಲ್ಲಿ ೬ ಸಂಚಿಕೆ. ಮೊದಲನೇ ಸಂಚಿಕೆಯಿಂದ ೪ ಸಂಚಿಕೆಯಲ್ಲಿ ಶ್ರೀ ಗೋಪಾಲದಾಸರ ಚಿತ್ರ ೫೦ ಪ್ರಕಟನೆಗಳು ಬರುವವು. (೫೦೦) ಜನ ಚಂದಾದಾರರು ಆದೊಡನೇ ಜಾನೇವರಿಯಲ್ಲಿ ಕೆಲ್ಸ ಪ್ರಾರಂಭಿಸುತ್ತದೆ. ೧ ವಾರದಲ್ಲಿ ಮುಂಗಡ ೫ ರೂ. ಕಳ್ಸಿ ಹೆಸರು ನೊಂದಾಯಿಸಿರಿ.

**ಹನುಮಂತರಾವ ಗೊರಾಬಾಳ**
— ಸಂಚಾಲಕ ಮಂಡಲ

---

ನ್ಯೂ ಗದಗ ಪ್ರಿಂಟರಿ, ಗದಗ.